ಹೊಸ ಅಭ್ಯಾಸ ಪತ್ರಿಕೆಯಂತೆ ತಯಾರಿಸಿದ

ಭಾರತದ

# ಐತಿಹಾಸಿಕ ಕಥೆಗಳು

[೩ನೇ ತರಗತಿಗೆ]






ಪ್ರಕಾಶಕರು:

ಭಾರತ ಬುಕ್ ಡಿಪೋ, ಧಾರವಾಡ.

೧೯೫೩ ] [೦-೮-೦

# ಪರಿವಿಡಿ



## ಭಾಗ: ೧ ಧರ್ಮ ಸ್ಥಾಪಕರು



## ಭಾಗ: ೨ ಬಲಶಾಲೀ ಅರಸರು



## ಭಾಗ: ೩ ರಾಜಕೀಯ ಗುರುಗಳು



## ಭಾಗ: ೪ ವೀರಮಹಿಳೆಯರು



## ಭಾಗ: ೫ ಸ್ವಾತಂತ್ರ್ಯವೀರರು




ಮುದ್ರಕರು :
ಬಿ. ಎನ್. ಹುದ್ದಾರ
ಭಾರತ ಮುದ್ರಣಾಲಯ
ಧಾರವಾಡ.

ಪ್ರಕಾಶಕರು :
ಎಚ್. ಎನ್. ಹುದ್ದಾರ
ಭಾರತ ಬುಕ್ ಡಿಪೊ,
ಧಾರವಾಡ.

# ಭಾರತದ ಐತಿಹಾಸಿಕ ಕಥೆಗಳು
## (ಮೂರನೆಯ ತರಗತಿಗೆ)

## ಭಾಗ ೧. ಧರ್ಮಸ್ಥಾಪಕರು.

## ೧. ಗೌತಮ ಬುದ್ಧ

### ಬೌದ್ಧ ಮತ ಸ್ಥಾಪಕರು.





ಅಹಿಂಸೆಯ ಬೀಜವನ್ನೂರಿದ, ಮತ್ತು ಅದನ್ನು ಜನರೊಳಗೆ ಕೃತಿಯಲ್ಲಿ ತಂದ ಪ್ರಥಮ ಮಹಾಪುರುಷ.



೧ ಗೌತಮ ಬುದ್ಧ

**ಕಪಿಲವಸ್ತು** ಎಂಬ ಒಂದು ನಗರವು ಹಿಮಾಲಯ ಪರ್ವತದ ಅಡಿಯಲ್ಲಿ ಇತ್ತು. ಅಲ್ಲಿಯ ರಾಜನಿಗೆ **ಗೌತಮನೆಂಬ** ಕುಮಾರನಿದ್ದನು. ಒಂದು ದಿನ ಆ ರಾಜಕುಮಾರನು ತಮ್ಮ ಅರಮನೆಯ ಕೈದೋಟದೊಳಗೆ ಅತ್ತಿತ್ತ ಅಲೆದಾಡುತ್ತಿದ್ದನು. ಅವನು ಹಾಗೆ ತಿರುಗುತ್ತಿರುವಾಗ ಹಂಸ ಪಕ್ಷಿಯ ಕಳವಳದ ದನಿ ಅವನ ಕಿವಿಗೆ ಬಿದ್ದಿತು. ರಾಜಕುಮಾರನು ಆಕಡೆ ತಿರುಗಿ ನೋಡಿದನು. ಬಾಣವು ತಾಗಿ ಗಾಯಗೊಂಡ ಹಂಸವೊಂದು ನೆಲದ ಮೇಲೆ ಬಿದ್ದು ಒದ್ದಾಡುತ್ತಿತ್ತು. ಅದನ್ನು ಕಂಡು ಗೌತಮನ ಮನವು ಮರಮರ ಮರುಗಿತು, ಅವನು ಅದರ ಮೈಯೊಳಗೆ ನಟ್ಟಿದ್ದ ಬಾಣವನ್ನು ಮೆಲ್ಲಗೆ ಕಿತ್ತು, ಗಾಯವನ್ನು ಕಟ್ಟಿ ಉಪಚರಿಸಿದನು. ಆಗ ಆ ಹಕ್ಕಿ ಚೇತರಿಸಿಕೊಂಡು ಬದುಕಿತು.

**ದೇವದತ್ತ** ಎಂಬವನು ಗೌತಮನ ಕಕ್ಕನ ಮಗನು, ಅಣ್ಣನು. ಅವನೇ ಆ ಹಕ್ಕಿಯನ್ನು ಬೇಟೆಯಾಡಿದ್ದನು. ಅವನು ಗೌತಮನ ಬಳಿಗೆ ಬಂದು, "ಗೌತಮ, ಈ ಹಂಸವನ್ನು ನಾನು ಹೊಡೆದಿದ್ದೇನೆ; ಇದನ್ನು ನನಗೆ ಕೊಡು," ಎಂದು ಬೇಡಿದನು.

ಅದಕ್ಕೆ ಗೌತಮನು "ದೇವದತ್ತಾ, ಇದನ್ನೇಕೆ ಬಾಣದಿಂದ ಹೊಡೆದೆ? ಬದುಕಿಕೊಂಡು ಇರಲಿ ಬಿಡು, ಪಾಪ!"

ಆ ಮಾತಿಗೆ ದೇವದತ್ತನು, "ಹೂಂ, ನನಗೆ ಹೇಳುವದಕ್ಕೆ ನೀನು ಯಾರು? ಇದು ನನ್ನ ಬೇಟೆ ನಾನು ಹೊಡೆದದ್ದು ನನಗೆ, ದೊರೆಯಲೇ ಬೇಕು. ಕೊಡು, ನನ್ನ ಹಂಸವನ್ನು ನನಗೆ," ಎಂದು ನುಡಿದನು.

"ಅಲ್ಲೋ! ದೇವದತ್ತಾ, ಹೀಗೇನು ಹೇಳುತ್ತೀ? ಆರೈಕೆ ಮಾಡಿ ಹಂಸದ ಜೀವವನ್ನು ಉಳಿಸಿದವನು ನಾನು; ಸಾಯಲೆಂದು ಬಾಣದಿಂದ ಹೊಡೆದು ಕೆಡವಿದವನು ನೀನು; ಅದು ಕಾಯುವವನ ಹತ್ತಿರ ಇರಬೇಕೋ ಕೊಲ್ಲುವವನ ಹತ್ತಿರವೊ? ನೀನು ಇಲ್ಲದ ಹಟ ಹಿಡಿಯಬಾರದು."

"ನಿನ್ನ ಜಾಣತನ ನಿನಗಿರಲಿ; ಅದನ್ನು ನನಗೆ ಕಲಿಸಬೇಡ. ನನ್ನ ಹಂಸವನ್ನು ನನಗೆ ಕೊಡು."

ಗೌತಮನ ಮಾತು ದೇವದತ್ತನಿಗೆ ನಾಟಲಿಲ್ಲ. ಅವರಿಬ್ಬರಲ್ಲಿಯೂ ಹುಟ್ಟಿದ ವಾದವು ಮುಗಿಯಲಿಲ್ಲ. ಅರಸನ ಮುಂದೆ ದೂರು ಒಯ್ದರು. ಇಬ್ಬರು ಅರಸುಮಕ್ಕಳ ನಡುವೆ ಹುಟ್ಟಿದ ಜಗಳ. ಆದುದರಿಂದ ಅರಸನು ಅವರ ದೂರನ್ನು ಪಂಚರಿಗೆ ಒಪ್ಪಿಸಿ, ವಿಚಾರಮಾಡಿ ತೀರ್ಪು ಕೊಡ ಬೇಕೆಂದು ಹೇಳಿದನು. ಇಬ್ಬರೂ ಹೇಳುವದನ್ನೂ ಪಂಚರು ಕೇಳಿ-ಕೊಂಡರು. ಗೌತಮನ ವಾದವು ಸರಿಯೆಂದು ಅವರಿಗೆ ತೋರಿತು. **"ರಕ್ಷಕನಿಗೇ ಹಂಸವು ಸಿಕ್ಕುವದು, ಭಕ್ಷಕನಿಗೆ ಸಿಕ್ಕಲಾರದು"** ಎಂದು ಪಂಚರು ತಮ್ಮ ತೀರ್ಮಾನವನ್ನು ಹೇಳಿದರು. ಗೌತಮನಿಗೆ ಗೆಲ-ವಾಯಿತು; ಹಂಸದ ಜೀವ ಉಳಿಯಿತು.

ಆಮೇಲೆ ಕೆಲವು ವರುಷಗಳು ಕಳೆದವು. ಒಂದು ದಿನ ಗೌತಮನು ಮನೆಬಿಟ್ಟು ಅಡವಿಗೆ ಹೊರಟುಹೋದನು. ಎಷ್ಟೋ ವರುಷಗಳ ವರೆಗೆ ಅವನು ಧ್ಯಾನ ಮಾಡಿದನು. ಮನುಷ್ಯನ ದುಃಖಗಳು ದೂರವಾಗುವದಕ್ಕೆ

ಉಪಾಯವನ್ನು ಅವನು ಕಂಡುಕೊಂಡನು. ಮತ್ತು, " **ಜೀವಿಗಳನ್ನು ರಕ್ಷಿಸಬೇಕು; ಸತ್ಯದಿಂದ ನಡೆಯಬೇಕು; ಆಚರಣೆ ಒಳ್ಳೆಯದಾಗಿರಬೇಕು; ಯಜ್ಞಗಳಲ್ಲಿ ಕೂಡ ಪಶುಗಳನ್ನು ಕೊಲ್ಲಕೂಡದು;** " ಎಂದು ಜನರಿಗೆ ಉಪದೇಶಿಸಿದನು.

ಮುಂದೆ ಜನರು ಗೌತಮನನ್ನು '**ಬುದ್ಧ**' ಎಂದು ಕರೆಯಲಾರಂಭಿಸಿದರು. ಬುದ್ಧ ಎಂದರೆ ತಿಳಿದವನು. ಗೌತಮನು '**ಗೌತಮ ಬುದ್ಧ**' ಎಂದು ಜಗತ್ತಿನಲ್ಲಿ ಹೆಸರಾದನು. ಗೌತಮಬುದ್ಧನ ಮತದಂತೆ ನಡೆಯುವವರಿಗೆ **ಬೌದ್ಧ**ರೆಂಬ ಹೆಸರು ಬಂದಿತು. ಚೀನ, ಜಪಾನ ದೇಶಗಳಲ್ಲಿ ಈಗಿರುವ ಜನರು ಹೆಚ್ಚಾಗಿ ಬೌದ್ಧರಾಗಿದ್ದಾರೆ. ಹಿಂದೂ ಧರ್ಮದವರು ಕೂಡ ಈಗ ಯಜ್ಞಗಳಲ್ಲಿ ಪಶುಗಳ ಬಲಿ ಕೊಡುವದಿಲ್ಲ, ಮತ್ತು ಗೌತಮನನ್ನು ಅವತಾರಿಕ ಪುರುಷನೆಂದು ಕರೆಯುತ್ತಾರೆ.

### — ಅಭ್ಯಾಸ —

೧. ಗೌತಮ–ದೇವದತ್ತರ ಜಗಳದಲ್ಲಿ ಪಂಚರು ಏನೆಂದು ತೀರ್ಪು ಕೊಟ್ಟರು?
೨. ಗೌತಮ ಬುದ್ಧನ ಉಪದೇಶವು ಯಾವದು ?



## ೨. ಶ್ರೀ. ಶಂಕರಾಚಾರ್ಯರು

### ಅದ್ವೈತಮತಸ್ಥಾಪಕರು

ಪೂರ್ಣಾನದಿಯ ಘಾಟು. ನೀರು ತುಂಬಿ ಸೂಸಿ ದಡದಡ ಒತ್ತರದಿಂದ ಹರಿಯುತ್ತಿದೆ. ಸ್ನಾನಕ್ಕೆ ಬಂದ ಹೆಂಗಸರು. ಗಂಡಸರು. ಹುಡುಗರು ಇವರಿಂದ ಘಾಟು ತುಂಬಿದೆ. ಕೆಲವರು ಬಟ್ಟೆಗಳನ್ನು ಒಗೆಯುತ್ತಿದ್ದಾರೆ; ಕೆಲವರು ನದಿಯೊಳಗೆ ಈಸುತ್ತಿದ್ದಾರೆ; ಇನ್ನು ಕೆಲವರು ದಂಡೆಯ ಮೇಲಿದ್ದಾರೆ. ಆಗ ಈಸುತ್ತಿದ್ದ ಒಬ್ಬ ಹುಡುಗನ ಕೂಗು ಕೇಳಿಸಿತು.

"ಅವ್ವಾ, ಮೊಸಳೆ ನನ್ನ ಕಾಲನ್ನು ಹಿಡಿದಿದೆ. ನಾನಿನ್ನು ಈಸಲಾರೆನು ! ನನಗೆ ಸಂನ್ಯಾಸವನ್ನು ತೆಗೆದುಕೊಳ್ಳಲಿಕ್ಕೆ ಒಪ್ಪಿಗೆ ಕೊಡು; ಅಂದರೆ ನಾನು ಸುಖವಾಗಿ ಸಾಯುತ್ತೇನೆ. ಏ ಅವ್ವಾ ! "

ಆ ಹುಡುಗನ ತಾಯಿ ದಂಡೆಯ ಮೇಲಿದ್ದಳು. ಮಗನ ಕೂಗನ್ನು ಕೇಳಿ ಆಕೆ ಅಳತೊಡಗಿದಳು. ನೀರಲ್ಲಿ ಇಳಿದು ಹುಡುಗನನ್ನು ಉಳಿಸುವ

ಧೈರ್ಯ ಯಾರಿಗೂ ಆಗಲಿಲ್ಲ. ಎಲ್ಲರೂ ಮರಗುತ್ತ ನೋಡುತ್ತ ನಿಂತರು. ಪಾಪ ತಾಯಿ ಹೆಂಗುಸು ಏನು ಮಾಡಬೇಕು ? "ಆಗಲಪ್ಪಾ, ಸಂನ್ಯಾಸ ತೆಗೆದುಕೋ" ಎಂದಳು. ಆದರೆ ಎಂಥ ಸೋಜಿಗ! "ನಾನು ಸಂನ್ಯಾಸವನ್ನು ಸ್ವೀಕರಿಸುತ್ತೇನೆ" ಎಂದು ಹುಡುಗನು ಅಂದ ಕೂಡಲೆ, ಮೊಸಳೆ ಅವನ ಕಾಲನ್ನು ಬಿಟ್ಟು ಬಿಟ್ಟಿತು. ಹುಡುಗನು ಭರಭರ ಈಸುತ್ತ ದಂಡೆಗೆ ಬಂದನು. ಆ ಹುಡುಗನ ಹೆಸರು ಶಂಕರ. ಶಂಕರನ ಹುಟ್ಟೂರು ದಕ್ಷಿಣ ಹಿಂದುಸ್ತಾನದಲ್ಲಿ ಪೂರ್ಣಾನದಿಯ ದಂಡೆಯ ಮೇಲಿರುವ **ಕಾಲಂಡಿ. ಶಿವ ಗುರು** ಮತ್ತು **ಶ್ರೀ ಅಂಬಿಕೆ** ಎಂಬವರು ಈತನ ತಂದೆ ತಾಯಿಗಳು. ಈ ಶಂಕರನೇ ಮುಂದೆ ಜಗತ್ತಿಗೆ ಹೆಸರಾದ **ಜಗದ್ಗುರು ಶಂಕರಾಚಾರ್ಯರು.**

ಮದುವೆಯಾಗುವ ಮೊದಲೇ ಸಂನ್ಯಾಸಿಯಾಗುವದಕ್ಕೆ ಶಂಕರನಿಗೆ ಅವನ ತಾಯಿ ಒಪ್ಪಿಗೆ ಕೊಟ್ಟಿರಲಿಲ್ಲ, ಅವನು ಮೊಸಳೆಯ ಬಾಯಿಗೆ ಸಿಕ್ಕಾಗ ಆ ಒಪ್ಪಿಗೆ ದೊರೆಯಿತು. ಆ ಬಳಿಕ ಆತನು ಶಾಸ್ತ್ರಗಳ ಅಭ್ಯಾಸ ಮಾಡಿದನು **ಗೋವಿಂದನಾಥ** ಎಂಬವರು ಆತನ ಗುರು. ಅವರ ಹರಕೆಗಳನ್ನು ಪಡೆದು ಆತನು ದೇಶವನ್ನೆಲ್ಲ ಸುತ್ತಿದನು. ಜನರಿಗೆ ಹಿಂದುಧರ್ಮವನ್ನು ಬೋಧಿಸಿದನು. **"ಎಲ್ಲ ಕಡೆಗೂ ದೇವರು ಒಬ್ಬನೇ; ಜಗತ್ತು ಸುಳ್ಳು, ಪರಮಾತ್ಮನೇ ಸತ್ಯ; ಆತನನ್ನು ಅರಿತುಕೊಳ್ಳಿರಿ,"** ಎಂಬುದು ಶಂಕರನ ಉಪದೇಶ.



೪. ಶ್ರೀ ಶಂಕರಾಚಾರ್ಯರು

ಆರ್ಯಧರ್ಮದ ಶ್ರೇಷ್ಠಗ್ರಂಥಗಳಾದ **ಶ್ರೀ ಗೀತೆ** ಹಾಗು **ಉಪನಿಷತ್ತುಗಳ** ತಿರುಳನ್ನು ತಿಳಿಸುವ ಹಲವು ಪುಸ್ತಕಗಳನ್ನು ಶ್ರೀಶಂಕರಾಚಾರ್ಯರು ಬರೆದರು. ಆಚಾರ್ಯರು ಸಭೆಗಳಲ್ಲಿ ಪಂಡಿತರೊಡನೆ ವಾದ ಹೂಡುತ್ತಿದ್ದರು ಅವರು ಕೇಳುವ ಪ್ರಶ್ನೆಗಳಿಗೆಲ್ಲ ಸರಿಯಾದ ಉತ್ತರ ಕೊಡುತ್ತಿದ್ದರು. ವಾದಗಳಲ್ಲಿ ಪಡೆಯುತ್ತಿದ್ದ ವಿಜಯಗಳಿಂದ ಶಂಕರಾಚಾರ್ಯರ ಪ್ರಭಾವ ಹೆಚ್ಚಿತು; ಅದರಿಂದ ಅವರ ಶಿಷ್ಯರ ಸಂಖ್ಯೆಯೂ ಬೆಳೆಯಿತು.

ಭಾರತದ ದಕ್ಷಿಣದ ತುದಿ ಕನ್ಯಾಕುಮಾರಿಯಿಂದ ಉತ್ತರ ತುದಿ ಹಿಮಾಲಯ ಪರ್ವತದ ವರೆಗೂ ಶಂಕರಾಚಾರ್ಯರು ಸಂಚಾರ ಮಾಡಿದರು.

ಹೋದಹೋದಲ್ಲಿ ಉಪನ್ಯಾಸ ಕೊಟ್ಟರು; ಹಿಂದುಗಳಿಗೆ ಮೋಕ್ಷದ ನಿಜವಾದ ಹಾದಿ ಯಾವುದೆಂಬುದನ್ನು ತಿಳಿಸಿದರು. ಅವರು ಕಾಶ್ಮೀರ ಪ್ರಾಂತಕ್ಕೂ ಹೋಗಿದ್ದರು. ಅಲ್ಲಿ ಶಾರದಾಂಬೆಯ ದೇವಾಲಯವುಂಟು. ಅದರ ಬಾಗಿಲು ಯಾವಾಗಲೂ ಮುಚ್ಚಿಯೇ ಇರುತ್ತಿತ್ತು. ಜಗತ್ತಿನ ಪಂಡಿತರನ್ನೆಲ್ಲ ಗೆಲ್ಲುವವನಿಗೇ ಈ ಬಾಗಿಲು ತೆಗೆಯುವದೆಂದು ಅಲ್ಲಿಯ ಜನರ ನಂಬಿಕೆಯಿತ್ತು. ಶಂಕರಾಚಾರ್ಯರು ಆ ಶಾರದಮ್ಮನ ಗುಡಿಯ ಬಾಗಿಲನ್ನು ತೆರೆದುಬಿಟ್ಟರು ! ಅವರ ಜ್ಞಾನಕ್ಕೆ ಎಲ್ಲರೂ ವಿನಯದಿಂದ ಬಾಗಿದರು.

ಕಿರಿಯ ವಯಸ್ಸಿನ ಈ ಹಿರಿಯ ವಿಭೂತಿ ತನ್ನ ಮೂವತ್ತೆರಡನೆಯ ವರುಷದಲ್ಲಿಯೆ ಸಮಾಧಿ ತೆಗೆದುಕೊಂಡಿತು.

**— ಅಭ್ಯಾಸ —**

೧. ಶಂಕರಾಚಾರ್ಯರು ಮಾಡಿದ ಉಪದೇಶವು ಯಾವದು ?

೨. ಶಂಕರಾಚಾರ್ಯರಂತೆಯೇ ಹಿಂದುಧರ್ಮದಲ್ಲಿ ಆಗಿಹೋದ ಬೇರೆ ಇಬ್ಬರು ಮೂವರ ಸಾಧುಸಂತರ ಹೆಸರುಗಳನ್ನು ಹೇಳಿರಿ.

# ೩. ಶ್ರೀ. ಮಧ್ವಾಚಾರ್ಯರು

## ದ್ವೈತ ಮತಸ್ಥಾಪಕರು.





**ಹರಿಯೇ ಸರ್ವೋತ್ತಮ ಜಗತ್ ಸತ್ಯ ನಾನು ಹರಿಯ ದಾಸ ಅವನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದರೆ ಎಲ್ಲರಿಗೂ ಕಾಣುವನು.**



೩. ಮಧ್ವಾಚಾರ್ಯರು

ಇವರು ಉಡಪಿಯ ಹತ್ತಿರ **ಪಾದುಕಾಕ್ಷೇತ್ರ**ವೆಂಬ ಗ್ರಾಮದಲ್ಲಿ ಜನಿಸಿದರು. ಇವರ ತಂದೆಯ ಹೆಸರು **ಮಧ್ಯಗೇಹಭಟ್ಟರು**. ಬಾಲಕನು ಚಿಕ್ಕಂದಿ

ನಿಂದಲೂ ಬಹು ಬುದ್ಧಿವಂತನು. ಅಚ್ಯುತ ಪ್ರೇಕ್ಷರೆಂಬ ಘನಪಂಡಿತ ರಲ್ಲಿ ಸಕಲ ಶಾಸ್ತ್ರಗಳನ್ನು ಅಭ್ಯಾಸ ಮಾಡಿದರು. ಚಿಕ್ಕಂದಿನಲ್ಲಿಯೇ ಸನ್ಯಾಸವನ್ನು ವಹಿಸಿದರು. ವಿಷ್ಣುವಿನ ಪೂಜೆ, ಜ್ಞಾನ, ಭಕ್ತಿ, ವೈರಾಗ್ಯ- ಗಳಲ್ಲಿ ಮನಸ್ಸನ್ನು ತೊಡಗಿಸಿ, ವೈಷ್ಣವ ಮತವನ್ನು ಸ್ಥಾಪಿಸಿದರು. ಇವರ ಮತಕ್ಕೆ ದ್ವೈತವೆಂಬ ಹೆಸರು. ಇವರು ಜನರಿಗೆ **ಜೀವನು ಬೇರೆ, ದೇವರು ಬೇರೆ, ಜೀವನು ದೇವರ ಸೇವಕನು. ದೇವನು ಸೇವೆ ಮಾಡಿಸಿ ಕೊಳ್ಳುವವನು. ಆತನೇ ಎಲ್ಲರನ್ನೂ ರಕ್ಷಿಸುವವನು.** ಎಂದು ಬೋಧಿಸಿದರು. ಇವರು ಹನುಮಂತನ ಅವತಾರವೆಂದು ಹಲವರ ನಂಬಿಕೆಯಿದೆ. ಇವರು ಮೂಲ ಮೂವತ್ತೇಳು ಗ್ರಂಥಗಳನ್ನು ರಚಿಸಿರುವರು.

ಇವರು ಒಂದುಸಲ ಸಮುದ್ರದ ಧಡದಲ್ಲಿ ಕುಳಿತು ಸ್ನಾನ ಸಂಧ್ಯಾದಿ ಕಾರ್ಯಗಳನ್ನು ಆಚರಿಸುತ್ತಿರುವಾಗ ಸಮುದ್ರದಲ್ಲಿ ಅಕಸ್ಮಿಕವಾಗಿ ಹಡ ಗವು ಮುಳುಗುತ್ತಿರುವದನ್ನುಕಂಡು ತಮ್ಮ ತಪಃಪ್ರಭಾವದಿಂದ ತಮ್ಮ ಮೈಮೇಲಿನ ಶಾಟಿಯಿಂದ ಬಿಸಲಾಗಿ ಆ ಹಡಗವು ಸುರಕ್ಷಿತವಾಗಿ ದಂಡೆಗೆ ತಲುಪಿತು. ಆಗ ನಾವಿಕನು ಸಂತೋಷಪಟ್ಟು ತಮಗೆ ಏನುಬೇಕೆಂದು ಕೇಳಲಾಗಿ ಶ್ರೀಗಳವರು ನಿನ್ನ ಹಡಗದಲ್ಲಿದ್ದ ಗೋಪೀಚಂದನವನ್ನು ಕೊಡು ಎಂದು ಬೇಡಿದರು. ಅದರಲ್ಲಿ (ಗೋಪೀಚಂದನದಲ್ಲಿ) ಉಡಪಿಯ ಶ್ರೀ ಕೃಷ್ಣನೂ, ವಡಬಂಡೇಶ್ವರನ ವಿಗ್ರಹಗಳು ಕಂಡವಂತೆ. ಇವರು ಎರಡನೆಯಸಾರೆ ತಮ್ಮ ಶಿಷ್ಯರೊಡನೆ ಬದರಿಕಾಶ್ರಮಕ್ಕೆ ಹೋದಾಗ ಶ್ರೀಗಳ- ವರು ಶಿಷ್ಯವೃಂದಕ್ಕೆ ನೀವಿನ್ನು ಮರಳಿ ಹೋಗಿರೆಂದು, ಹೇಳಿದರೆ ಅವರೊಲ್ಲ- ಬ್ಬರು ನಾವು ನಿಮ್ಮನ್ನು ಹಿಂಬಾಲಿಸುವುವೆಂದು ಹೇಳಿದರು ಆದರೆ ಅವರು (ಶ್ರೀಗಳವರು) ಇವರ ಮಾತಿಗೆ ಒಪ್ಪದೆ ತಾವು ಹೋಗುತ್ತಿರುವಾಗಲೇ ಅದ್ರಶ್ಯರಾದರು ಎಂದು ಹಿರಿಯರು ಹೇಳುವರು.

## — ಅಭ್ಯಾಸ —

೧. ಮಧ್ವಾಚಾರ್ಯರು ಯಾವ ಮತವನ್ನು ಸ್ಥಾಪಿಸಿದರು ?
೨. ಇವರು ಜನರಿಗೆ ಏನೆಂದು ಬೋಧಿಸಿದರು ?
೩. ಮಧ್ವಾಚಾರ್ಯರ ಬದರಿಕಾಶ್ರಮಕ್ಕೆ ತೆರಳಿದ ಸನ್ನಿವೇಶ ವರ್ಣಿಸಿರಿ.



# ೪. ಜಗದ್ಗುರು ಬಸವಣ್ಣನವರು

## ವೀರಶೈವ ಮತಸ್ಥಾಪಕರು.

**ನನಗೆ ನಿನ್ನ ನಾಮಾಮೃತದ ಹೊರತಾಗಿ ಇನ್ನಾವ ನುಡಿಗಳು ಕೇಳಿಸದಂತೆ ಕಿವುಡನನ್ನಾಗಿ ಮಾಡು ತಂದೆ.**

**ನಿನ್ನ ದರುಶನದ ವಿನಃ ಇನ್ನಾವದೃಶ್ಯವೂ ಕಾಣದಂತೆ ಅಂಧ ಕನ ಮಾಡಯ್ಯ ತಂದೆ.**

ಎಂದು ಕೂಡಲಸಂಗಮದೇವರಲ್ಲಿ ಅನನ್ಯ ಭಾವದಿಂದ ಪ್ರಾರ್ಥಿಸಿದ್ದಾರೆ.

ಇವರು ಯಾರು ಗೊತ್ತೆ? ಇವರೇ ಶ್ರೀ ಜಗದ್ಗುರು ಬಸವಣ್ಣನವರು.

ಇವರು ೧೧೩೨ ರಲ್ಲಿ ವಿಜಾಪೂರ ಜಿಲ್ಹೆಯ **ಬಸವನ ಬಾಗೇವಾಡಿ** ಯೆಂಬ ಗ್ರಾಮದಲ್ಲಿ ಹುಟ್ಟಿದರು. ಇವರ ತಂದೆಯ ಹೆಸರು **ಮಾದರಸ.** ತಾಯಿ **ಮಾದಲಾಂಬಿಕೆಯು.** ಇವರು ಸ್ಮಾರ್ತ ಬ್ರಾಹ್ಮಣರು. ಈ ಪುಣ್ಯದಂಪತಿಗಳು ಮಕ್ಕಳಿಲ್ಲದ್ದಕ್ಕಾಗಿ ನಾಂದೀವ್ರತವನ್ನಾಚರಿಸಿ ಈ ಬಸವಣ್ಣನವರನ್ನು ಪಡೆದರು. ಚಿಕ್ಕಂದಿನಲ್ಲಿಯೇ ಈತನಿಗೆ ಮುಂಜಿವೆ ಮಾಡಬೇಕೆಂದು ತಂದೆ ತಾಯಿಗಳು ನಿಶ್ಚಯಿಸಿದರು. ಆಗ ಬಸವಣ್ಣನವರು ತಮಗೆ ಲಿಂಗದೀಕ್ಷೆಯಾಗಿದೆಯೆಂದು ಹೇಳಿದರು. ಮುಂಜಿವೆ ಮಾಡಿಕೊಳ್ಳುವದನ್ನು ಬಿಟ್ಟು ಜಾತವೇದಿ ಮುನಿಗಳಲ್ಲಿ ಸಕಲ ಶಾಸ್ತ್ರಗಳನ್ನು ಓದಿ ಪಂಡಿತರಾದರು. ಮುಂದೆ ಬಲದೇವ ಮಂತ್ರಿಯ ಮಗಳನ್ನು ಮದುವೆ ಮಾಡಿಕೊಂಡರು. ಎಷ್ಟೋ ದಿನ ಬಿಜ್ಜಳರಾಯನ ರಾಜ್ಯದಲ್ಲಿ ಲೆಕ್ಕ ಪತ್ರದ ಕಾರಕೂನರಾಗಿದ್ದರು.



೪. ಬಸವಣ್ಣನವರು.

ಒಂದು ದಿನ ನೆರೆದ ರಾಜ ಸಭೆಯಲ್ಲಿ ಯಾರಿಗೂ ಓದಲಿಕ್ಕೆ ಬಾರದ ಒಂದು ಪತ್ರವನ್ನು ಓದಿ ಹೇಳಿದ್ದರಿಂದ ಅರಸನ ಸಿಂಹಾಸನದ ಬುಡದಲ್ಲಿ ಹೇರಳವಾದ ದ್ರವ್ಯ ದೊರಕಿತು. ಅಂದಿನಿಂದ ಬಿಜ್ಜಳರಾಯನ ಪ್ರೇಮವು ಬಸವಣ್ಣನವರ ಮೇಲೆ ಹೆಚ್ಚಾಗಿ ಬೆಳೆಯತೊಡಗಿತು. ಬಲದೇವ ಮಂತ್ರಿಯು

ತರುವಾಯ ಬಸವಣ್ಣನವರೇ ಮುಖ್ಯ ಮಂತ್ರಿಯಾದರು. ಇವರ ಜಾಣ ತನಕ್ಕೆ ಪ್ರಜೆಗಳೂ ಅರಸರೂ ಮೆಚ್ಚಿದರು.

ತಮ್ಮ ರಾಜ್ಯದಲ್ಲಿ ಎಲ್ಲ ಪ್ರಜೆಗಳೂ ಸುಖಿಗಳಾಗಿ ಬಾಳಬೇಕೆಂದು ಬಸವಣ್ಣನವರು ಕೆಲವು ಕಾರ್ಯಗಳನ್ನು ಕೈಕೊಂಡರು. ಎಲ್ಲರೂ **"ದುಡಿದು ಉಣ್ಣಬೇಕು"** ಎಂದು ಬೋಧಿಸಿ ದುಡಿಯ ಹಚ್ಚಿದರು. ಸ್ವತಃ ತಾವು ದುಡಿಯ ಹತ್ತಿದರು.

ಸಮಾಜದಲ್ಲಿ ಕೀಳು ಮೇಲುಗಳಿಂದ ಒಕ್ಕಟ್ಟು ಉಳಿಯುವದಿಲ್ಲ. ಇದನ್ನು ಕಿತ್ತೊಗೆಯುವದಕ್ಕಾಗಿ ಎಲ್ಲರಿಗೂ ಲಿಂಗಧಾರಣ ಮಾಡಿದರು. ಲಿಂಗಧಾರಣ ಮಾಡಿದವರೆಲ್ಲರೂ ಸಮಾನರು, ಎಂದು ಉಪದೇಶ ಮಾಡಿದರು. ಇದರಿಂದ ಹರಿಜನ ಉದ್ಧಾರವಾಗಿ ಸಮಾಜದಲ್ಲಿ ಒಕ್ಕಟ್ಟು ಬೆಳೆಯಿತು. ಮಹಾತ್ಮಾ ಗಾಂಧಿಯವರ ತತ್ವಗಳಂತೆಯೇ ಇವರ ತತ್ವಗಳಿದ್ದುದರಿಂದ ಬಸವಣ್ಣನವರ ಮೇಲೆ ಪ್ರೀತಿ-ವಿಶ್ವಾಸಗಳು ಬೆಳೆದು ಜನರು ಇವರನ್ನು ಮಹಾತ್ಮರೆಂದು ತಿಳಿಯತೊಡಗಿದರು.

ಬಸವಣ್ಣನವರು ತಮ್ಮ ಜೀವನದಲ್ಲಿ ಪಡೆದ ಸುಖ-ದುಃಖಗಳಿಂದ ಅನಂತ ಅನುಭವದ ವಚನಗಳನ್ನು ಜನರಲ್ಲಿ ಬೀರಿ ಅನುಭಾವೀ ಬಸವಣ್ಣ ನವರೆಂದು ಕೀರ್ತಿ ಪಡೆದರು. ಮಂತ್ರಿ ಪದದಿಂದ ಬಿಡುಗಡೆ ಹೊಂದಿ ಕೂಡಲ ಸಂಗಮೇಶ್ವರನ ಭಕ್ತರಾದ ಬಸವಣ್ಣನವರು ಆತನ ಸೇವೆ ಮಾಡಿ ಆ ದೇವನಲ್ಲಿಯೇ ೧೧೬೭ ರಲ್ಲಿ ಐಕ್ಯ ಹೊಂದಿದರು.

## — ಅಭ್ಯಾಸ —

೧. ಬಸವಣ್ಣನವರು ಜನರಿಗೆ ಏನೆಂದು ಬೋಧಿಸಿದರು ?

೨. ಜನರು ಇವರನ್ನು ಯಾಕೆ ಮಹಾತ್ಮರೆಂದು ಕರೆದರು ?

೩. ಇವರು ಯಾವ ಕೀರ್ತಿಯನ್ನು ಪಡೆದರು ?



# ೫. ಕಬೀರ

## ಧರ್ಮಗಳನ್ನು ಒಂದುಗೂಡಿಸಲು ಪ್ರಯತ್ನಿಸಿದವರೊಳ್ಳಬ್ಬ ಮಹಾಪುರುಷ

ನೀರೂ ಒಬ್ಬ ಬಡ ಮುಸಲ್ಮಾನ. ಅವನು ಬಲು ಕಷ್ಟದಿಂದ ಜೀವನವನ್ನು ಸಾಗಿಸುತ್ತಿದ್ದನು. ಅವನಿಗೆ ಮಕ್ಕಳು ಮರಿ ಆಗಿರಲಿಲ್ಲ. ಅವನು ಒಂದು ದಿನ ಕರೆಯದಂಡೆಯಮೇಲೆ ಹೋಗುತ್ತಿದ್ದಾಗ, ಯಾರದೋ ಅಳುವು ಕೇಳಿಸಿತು. ನೀರೂ ಅಲ್ಲಿಗೆ ಹೋಗಿ ನೋಡಿದನು. ಅಳುತ್ತಿದ್ದುದು ಒಂದು ಕೂಸು. ಯಾರೊ ಒಗೆದು ಹೋಗಿದ್ದರು. ಅದನ್ನು ನೋಡಿ ಅವನಿಗೆ ದಯೆ ಹುಟ್ಟಿತು. ಅವನು ಆ ಕೂಸನ್ನು ತನ್ನ ಮನೆಗೆ ಒಯ್ದನು. ಮಕ್ಕಳಿಲ್ಲದ ತನಗೆ ದೇವರೇ ಈ ಕೂಸನ್ನು ಕೊಟ್ಟನೆಂದು ಪ್ರೀತಿಯಿಂದ ಜೋಪಾನ ಮಾಡಿದನು. ಮತ್ತು ಈ ಕೂಸಿಗೆ ಕಬೀರನೆಂದು ಹೆಸರಿಟ್ಟನು.



೫. ಕಬೀರ

ಹೊಟ್ಟೆಒಟ್ಟೆಗೇ ತೊಂದರೆಯಿರುವಾಗ, ಪಾಪ, ನೀರೂ ಕಬೀರನಿಗೆ ಓದು-ಬರೆಹ ಹೇಗೆ ಕಲಿಸಬೇಕು? ಅದು ಅವನಿಗೆ ಸಾಧ್ಯವಾಗಲಿಲ್ಲ. ಆದರೆ ಕಬೀರನು ಹುಟ್ಟು ಜಾಣ. ತಿಳಿವಳಿಕೆಯ ವಯಸ್ಸು ಆಗುತ್ತಲೇ, ಅವನು ಹಿಂದೀ ಭಾಷೆಯಲ್ಲಿ ಪದಗಳನ್ನು ಕಟ್ಟತೊಡಗಿದನು. ದೇವರ ಭಜನೆಯನ್ನು ಮಾಡತೊಡಗಿದನು. ಭಜನೆ ಮಾಡುತ್ತಲೇ ಒಟ್ಟೆ ನೇಯುತ್ತಿದ್ದನು.

ಆಗ ರಾಮಾನಂದರೆಂಬ ಸಾಧು ಕಾಶಿಯಲ್ಲಿರುತ್ತಿದ್ದರು. ಅವರು ಒಳ್ಳೇ ಪ್ರಸಿದ್ಧ ಸಾಧು; ಅವರಲ್ಲಿ ಬಹಳ ಜನ ಶಿಷ್ಯರಿದ್ದರು. ತಾನೂ ಆ ಸಾಧುವಿನ ಶಿಷ್ಯನಾಗಬೇಕೆಂದು ಕಬೀರನಿಗೆ ಮನಸ್ಸಾಯಿತು. ಆದರೆ ಅವನು ಬಡವ, ಮುಸಲ್ಮಾನ. ರಾಮಾನಂದರ ಮಠದಲ್ಲಿ ಕಬೀರನನ್ನು ಸೇರಿಸಿಕೊಳ್ಳುವದು ಹೇಗೆ? ಆದರೂ ರಾಮಾನಂದರನ್ನು ತನ್ನ ಗುರುಗಳನ್ನಾಗಿ ಮಾಡಿಕೊಳ್ಳಬೇಕೆಂದು ಅವನು ನಿಶ್ಚಯಮಾಡಿದನು. ಅದಕ್ಕಾಗಿ ಅವನೊಂದು ಹಂಚಿಕೆಯನ್ನು ಹೂಡಿದನು. ಆ ಸಾಧು ದಿನಾಲು ನಸುಕಿನಲ್ಲಿ ಗಂಗಾನದಿಗೆ ಸ್ನಾನಕ್ಕೆ ಹೋಗುವದು ಕಬೀರನಿಗೆ ತಿಳಿಯಿತು. ಒಂದು ದಿವಸ ಅವನು ಮೊದ್ದು ನಸುಕಿನಲ್ಲಿ ಎದ್ದು ಗಂಗಾನದಿಯ ಘಾಟಿಗೆ ಹೋದನು. ಆಗಿನ್ನೂ

ಕತ್ತಲೆಯಿತ್ತು; ಚಳಿಯಿತ್ತು. ಅವನು ಮೈ ಮುದ್ದೆ ಮಾಡಿಕೊಂಡು ಮೆಟ್ಟಿಲ ಮೇಲೆ ಕುಳಿತುಕೊಂಡನು.

ಕೆಲ ಹೊತ್ತಿನ ಮೇಲೆ ರಾಮಾನಂದ ಸಾಧುಗಳು ಬಂದರು. ಘಾಟಿನ ಮೆಟ್ಟಿಲುಗಳನ್ನು ಇಳಿಯುತ್ತಿದ್ದಾಗ ಸಾಧುವಿನ ಕಾಲು ಕಬೀರನಿಗೆ ತಾಗಿತು. ಕೂಡಲೆ ಸಾಧುವಿನ ಬಾಯಿಂದ "ರಾಮ ರಾಮ!" ಎಂಬ ಶಬ್ದಗಳು ಹೊರಟವು. ಒಡನೆ ರಾಮಾನಂದರು ಕಬೀರನನ್ನು "ಯಾಕೆ, ಯಾರು" ಎಂದು ವಿಚಾರಿಸಿದರು. ಕಬೀರನು ಎಲ್ಲವನ್ನೂ ಹೇಳಿದನು. ಅದನ್ನು ಕೇಳಿ ಈ ಹುಡುಗನು ತನ್ನ ಶಿಷ್ಯನಾಗಲು ಯೋಗ್ಯನಿದ್ದಾನೆಂದು ರಾಮಾನಂದರಿಗೆ ಅನಿಸಿತು. ಅಂದಿನಿಂದ ಕಬೀರನು ಆ ಸಾಧುವಿನ ಶಿಷ್ಯನಾದನು.

ಮುಂದೆ ಕಬೀರನು ದೊಡ್ಡವನಾದ ಬಳಿಕ, ಇವನ ಭಜನೆಯನ್ನು ಕೇಳಲು ಬಹಳ ಜನರು ಸೇರಿಯುತ್ತಿದ್ದರು. ಅವರೊಳಗೆ ಹಿಂದುಗಳೂ ಇದ್ದರು; ಮುಸಲ್ಮಾನರೂ ಇದ್ದರು. ಕಬೀರನು ಧರ್ಮದಿಂದ ಮುಸಲ್ಮಾನ, ಆದರೆ ಅವನು ಮಾಡುತ್ತಿದ್ದುದು ರಾಮನ ಭಜನೆ.

**"ರಾಮನೂ ರಹೀಮನೂ ಒಂದೇ. ಮನಸ್ಸಿಟ್ಟು ಭಕ್ತಿ ಮಾಡಿದರೆ ದೇವರು ಒಲಿಯುವನು. ತನ್ನ ಭಜನೆಯನ್ನು ಮಾಡುವವನು ಯಾವ ಜಾತಿಯವನೆಂಬುದನ್ನೇನೂ ದೇವರು ನೋಡುವದಿಲ್ಲ."** ಎಂದು ಕಬೀರನು ಉಪದೇಶಿಸುತ್ತಿದ್ದನು. ಅವನ ವಿಚಾರಗಳು ಹಲವು ಜನರಿಗೆ ಸರಿಯೆಂದು ಕಂಡವು; ಅನೇಕರು ಆತನ ಮತಕ್ಕೆ ಒಲಿದರು. ಆತನ ಶಿಷ್ಯರು ಹಿಂದುಗಳಲ್ಲಿಯೂ ಇದ್ದಾರೆ, ಮುಸಲ್ಮಾನರಲ್ಲಿಯೂ ಇದ್ದಾರೆ. ಅವರು ತಮ್ಮನ್ನು **"ಕಬೀರ ಪಂಥೀಯರು"** ಎಂದು ಹೇಳಿಕೊಳ್ಳುತ್ತಾರೆ. ಈ ಪಂಥದ ಎಷ್ಟೋ ಲಕ್ಷ ಜನ ಈಗಲೂ ಇದ್ದಾರೆ. ಆದರೆ ಆ ಕಾಲದಲ್ಲಿ ಕೆಲಜನ ಮುಸಲ್ಮಾನರಿಗೆ ಉಪದೇಶವು ಸೇರಲಿಲ್ಲ. ಅವರು ಬಾದಶಹನಿಂದ ಅವನಿಗೆ ಶಿಕ್ಷೆ ಮಾಡಿಸಿದರು. ಕಬೀರನು ಹಿಂದಿಯಲ್ಲಿ ಅಸಂಖ್ಯ ಪದಗಳನ್ನು ರಚಿಸಿದ್ದಾನೆ. ಅವುಗಳಿಗೆ **"ಸಾಖೀ"** ಎನ್ನುತ್ತಾರೆ. ಅವನ ಶಿಷ್ಯರು ಎಷ್ಟೋ ಸಾಖಿಗಳನ್ನು ಸಂಗ್ರಹಿಸಿದ್ದಾರೆ.

ಕಾಶಿಯ ಹತ್ತಿರ **ಮಗಹರ** ಎಂಬ ಒಂದು ಸ್ಥಳವಿದೆ. ಅಲ್ಲಿ ಸಾಯುವ ಮನುಷ್ಯನು ನರಕಕ್ಕೆ ಹೋಗುತ್ತಾನೆ ಎಂದು ಜನರ ತಿಳುವಳಿಕೆಯಿತ್ತು. ಇಂತಹ ಮಾತುಗಳನ್ನು ಕಬೀರನು ನಂಬುತ್ತಿರಲಿಲ್ಲ. ಕಬೀರನು ತನ್ನ

ಕೊನೆಯ ದಿನಗಳನ್ನು ಮಗಹರದಲ್ಲಿ ಕಳೆಯ ತೊಡಗಿದನು. ಮತ್ತು ಅವನ ಅವಸಾನ ಕಾಲ ಸಮಿಪಿಸಿದಾಗ ಹಿಂದು, ಮುಸಲ್ಮಾನರಲ್ಲಿ ವ್ಯಾಜ್ಯ ವುಂಟಾಗಿ, ಮುಸಲ್ಮಾನರು ಆತನ ದೇಹವನ್ನು ದಫನ ಮಾಡಬೇಕೆಂಬದೂ ಹಿಂದುಗಳು ದಹನ ಮಾಡಬೇಕೆಂದೂ ಹಟಹಿಡಿದರು. ಆಗ್ಗೆ ಕಬೀರನು ತನ್ನದೇ ಅಭಿಪ್ರಾಯವನ್ನು ತಿಳಿಸಿದನು ಎನೆಂದರೆ "ಈ ನನ್ನ ದೇಹವನ್ನು ಬಟ್ಟೆಯಿಂದ ಮುಚ್ಚಿಬಿಡಿ." ಎಂದನು ಮತ್ತು ಹಾಗೆ ಮಾಡಿದ ಕೆಲವೊಂದು ವೇಳೆಯ ನಂತರ ಬಟ್ಟೆ ತೆಗೆಯಲಾಗಿ ಅವನ ದೇಹವೆಲ್ಲ ಹೂವಾಗಿ ಮಾರ್ಪಡಿಸಿತ್ತು. ನಂತರ ಹಿಂದುಗಳು ಕೆಲವು ಹೂಗಳನ್ನು ದಹನಮಾಡಿ ಕಾಶಿಯಲ್ಲಿ ಗಂಗಾನದಿಯಲ್ಲಿ ಚಲ್ಲಿದರು ಮುಸಸ್ಮಾನರು ಇಸ್ಸುಳಿದ ಹೂಗಳನ್ನು ಗೋರಖಪುರದಲ್ಲಿ ಸಮಾಧಿ ಮಾಡಿದ ಬಗ್ಗೆ ಕಥೆಯುಂಟು.

— ಅಭ್ಯಾಸ —

೧. ರಾಮಾನಂದರ ಭೆಟ್ಟಿಗಾಗಿ ಕಬೀರನು ಹೂಡಿದ ಹಂಚಿಕೆ ಯಾವದು ?

೨. ಕಬೀರನು ಏನೆಂದು ಉಪದೇಶಿಸುತ್ತಿದ್ದನು ?

೩. ಕಬೀರನ ಕೊನೆಯದಿನದ ಬಗೆಗೆ ನಿಮಗೆ ಗೊತ್ತಿದುದನ್ನು ಬರೆಯಿರಿ.

## ೬. ಗುರು ನಾನಕ

### ಶೀಖಧರ್ಮದ ಸ್ಥಾಪಕ.

### ಧರ್ಮಗಳನ್ನು ಒಂದುಗೂಡಿಸಲು ಪ್ರಯತ್ನಿಸಿದವರೊಲ್ಲಬ್ಬ ಮಹಾಪುರುಷ

ಪಂಜಾಬದಲ್ಲಿಯ ಒಂದು ಸಾಲೆಯಲ್ಲಿ ಒಮ್ಮೆ ಒಂದು ಪ್ರಸಂಗ ನಡೆಯಿತು. ಗುರುಗಳು ಪ್ರಶ್ನೆಗಳನ್ನು ಕೇಳುತ್ತಿದ್ದರು; ಹುಡುಗರು ಅವ್ಯಗಳಿಗೆ ಉತ್ತರ ಹೇಳುತ್ತಿದ್ದರು. ಆಗ ಒಬ್ಬ ಹುಡುಗನು ನಡುವೆಯೇ ಎದ್ದು ನಿಂತನು. ಗುರುಗಳಿಗೆ ಒಂದೇ ಸವನೆ ಆರೆಂಟು ಪ್ರಶ್ನೆಗಳನ್ನು ವಿಚಾರಿಸಿದನು.

"ದೇವರು ಧರ್ಮ ಎಂಬುದು ಎಲ್ಲವೂ ಸುಳ್ಳೇ ಸರಿ. ದೇವರು ಇರುವವನು ಒಬ್ಬನೇ ಅಲ್ಲವೆ? ಅಂದ ಬಳಿಕ ಬೇರೆ ಬೇರೆ ಧರ್ಮ ಗಳಿಗಾಗಿ ಜನರು ತಮ್ಮತಮ್ಮೊಳಗೆ ಜಗಳ ಮಾಡುವದು ಏಕೆ? ಕಾಪಾಡುವದರಲ್ಲಿ ಸುಖವುಂಟೇ?" ಎಂದು ಆ ಹುಡುಗನು ಪ್ರಶ್ನಿಸಿ ದನು.



೬. ಗುರು ನಾನಕ

ಈ ಹುಡುಗನ ಹೆಸರು ನಾನಕನೆಂದು. ನಡುವೆಯೆ ಎದ್ದು ಹೀಗೆ ಕೇಳಿದ್ದಕ್ಕೆ ಗುರುಗಳು ಸಿಟ್ಟಾಗಿ, ನಾನಕನನ್ನು ಅಧಿಕಪ್ರಸಂಗಿ ಎಂದು ಬಯ್ದು ಹೊರಗೆ ಹಾಕಿದರು. ಅವನು ಅಂದಿ ನಿಂದ ಸಾಲೆಯನ್ನು ಬಿಟ್ಟೇ ಬಿಟ್ಟನು.

ಮಗನು ಏನೂ ಕಲಿಯಲೊಲ್ಲನೆಂದು ನಾನಕನ ಹಿರಿಯರಿಗೆ ಬಹಳ ಖೇದವಾಯಿತು. ಅವರಿಗೆ ಅವನ ಮೇಲೆ ಕೋಪವೂ ಬಂದಿತು. ದನಗಳನ್ನಾದರೂ ಕಾಯಿ ಎಂದು ಆ ಕೆಲಸಕ್ಕೆ ಅವನನ್ನು ನಿಯಮಿಸಿದರು. ಅವನು ದನಗಳನ್ನು ಅಡವಿಗೆ ಹೊಡೆದುಕೊಂಡು ಹೋಗತೊಡಗಿದನು. ಆದರೆ ಇದರಿಂದ ನಾನಕನಿಗೆ ಬಹಳ ಕೆಡಕೆನಿಸಿತು. ಅವನ ಮನಸ್ಸಿಗೆ ಶಾಂತಿ ಇಲ್ಲದಾಯಿತು. ಯಾವ ಕೆಲಸದಲ್ಲಿಯೂ ಅವನಿಗೆ ಲಕ್ಷ್ಯವುಳಿಯ ಲಿಲ್ಲ. ಅಡವಿಗೆ ಹೋದಾಗ ಯಾವಾಗಲೂ ವಿಚಾರದಲ್ಲಿಯೇ ತೊಡಗಿರು ತ್ತಿದ್ದನು. ಮರದಡಿಯಲ್ಲಿ ಕುಳಿತು ವಿಚಾರದಲ್ಲಿ ಮುಳುಗಿ ಮೈಮರೆತ ನಾನಕನಿಗೆ ದನ-ಕರುಗಳ ಪರಿವೆಯೇ ಇರುತ್ತಿರಲಿಲ್ಲ. ಅಡವಿಗೆ ಬರುವಾಗ ತಾಯಿ ಅವನಿಗೆ ಬುತ್ತಿ ಕಟ್ಟಿಕೊಟ್ಟಿರುತ್ತಿದ್ದಳು. ಅದನ್ನೆಲ್ಲ ಅವನು ಹುಡು ಗರಿಗೆ ಹಂಚಿ ಬಿಡುತ್ತಿದ್ದನು. ಇದರಿಂದ ನಾನಕನು ಸುಖವನ್ನು ಶೋಧಿಸ ತೊಡಗಿದನು.

ಕೊನೆಗೆ ಅವನಿಗೆ "ಮಾನವರು ಎಲ್ಲರೂ ಒಂದೇ; ಹಿಂದು, ಮುಸಲ್ಮಾನ, ಬುದ್ಧ, ಜೈನ ಮೊದಲಾದ ಧರ್ಮ ಭೇದಗಳೆಲ್ಲವೂ ಸುಳ್ಳು" ಎಂದು ಮನವರಿಕೆಯಾಯಿತು. "ತಮ್ಮತಮ್ಮೊಳಗೆ ಯಾರೂ ಬಡಿದಾಡಬಾರದು; ಜಾತಿ ಭೇದವು ಇರಕೂಡದು; ಮೂರ್ತಿಪೂಜೆ

**ಮಾಡಲಾಗದು ಜನರೆಲ್ಲರೂ ಒಬ್ಬ ದೇವನ ಮಕ್ಕಳು; ಎಲ್ಲರೂ ಒಕ್ಕಟ್ಟಿನಿಂದಿರಬೇಕು. ಇದರಲ್ಲಿಯೇ ನಿಜವಾದ ಸುಖವಿರುವದು. ಪ್ರತಿಯೊಬ್ಬನೂ ಮಾನವ ಧರ್ಮವನ್ನು ಪಾಲಿಸಬೇಕು, ಬಡವರನ್ನು ರಕ್ಷಿಸಬೇಕು,"** ಎಂಬುದಾಗಿ ನಾನಕನು ಎಲ್ಲ ಜನರಿಗೆ ಬೋಧಿಸಿದನು.

ಅನೇಕ ಜನರಿಗೆ ನಾನಕನ ಉಪದೇಶವು ಸರಿಯೆಂದು ತೋರಿತು. ಅವರು ಆತನ ಶಿಷ್ಯರಾದರು. ಶಿಷ್ಯರೆಂದರೆ ಶೀಖರು. ಶೀಖರು ನಾನಕನ ಬೋಧನೆಯಂತೆ ನಡೆಯಲಾರಂಭಿಸಿದರು. ಗುರುನಾನಕನು ಶೀಖ ಧರ್ಮದ ಸಂಸ್ಥಾಪಕನು. ಇಡಿ ಪಂಜಾಬ ಪ್ರಾಂತದಲ್ಲಿ ಈ ಧರ್ಮವು ಹಬ್ಬಿತು. ಶೀಖರ ಧರ್ಮಗ್ರಂಥಕ್ಕೆ 'ಗ್ರಂಥ ಸಾಹೇಬ' ಎಂದು ಅನ್ನುತ್ತಾರೆ.

### — ಅಭ್ಯಾಸ —

೧. ನಾನಕನು ಏಕೆ ಪನಕಾಯಬೇಕಾಯಿತು ?
೨. ನಾನಕನು ಜನರಿಗೆ ಮಾಡಿದ ಉಪದೇಶವು ಯಾವದು ?

## ೭. ಗುರುಗೋವಿಂದ ಸಿಂಹ

### ಶೀಖರ ಒಂಬತ್ತನೆಯ ಗುರು.

**ಗ್ರಂಥಸಾಹೇಬನೇ ನಿಮ್ಮ ಗುರು. ಧರ್ಮದ ಸಲುವಾಗಿ ಜೀವವನ್ನು ಪಣಕಿಟ್ಟು ಹೋರಾಡಿರಿ.**

ಗುರುಗೋವಿಂದ ಸಿಂಹರ ಕೊನೆಯ ಉದ್ಗಾರಗಳಿವು.

ಶೀಖರು ಹೋರಾಟದ ವೃತ್ತಿಯವರೆಂದು ಹೆಸರಾದವರು. ಅವರನ್ನು ಯೋಧರನ್ನಾಗಿ ಮಾಡಿದವನು **ಗುರುಗೋವಿಂದ ಸಿಂಹನು.** ಈತನು ಶೀಖರ ಒಂಬತ್ತನೆಯ ಗುರು. ಮತ್ತು ಈತನೇ ಕೊನೆಯ ಗುರು. **ನಾಂದೇಡ** ಎಂಬಲ್ಲಿ ಗೋವಿಂದ ಸಿಂಹನ ಸಮಾಧಿಯಿದೆ; ಶೀಖರ ಪ್ರಸಿದ್ಧವಾದ ಧರ್ಮಮಂದಿರವಿರುವದೂ ಅಲ್ಲಿಯೆ. ನಿಜಾಮರ ಪೂರ್ವದ ರಾಜ್ಯದಲ್ಲಿ ನಾಂದೇಡವಿದೆ.

ಗುರು ಗೋವಿಂದ ಸಿಂಹನು ಶೀಖರನ್ನು ಹೀಗೆ ತಯಾರುಮಾಡುವ ದಕ್ಕೆ ಅಂಥ ಕಾರಣವೂ ಘಟಿಸಿತು. ದಿಲ್ಲಿಯ ಬಾದಶಹನಾದ ಔರಂಗ ಜೇಬನು ಈತನ ತಂದೆಯನ್ನು ಬಹಳವಾಗಿ ಕಾಡಿದನು; ಕಾಡಿ ಕಾಡಿ ಕೊನೆಗೆ ಅವನ ಕೊಲೆ ಮಾಡಿಸಿದನು. ಆಗ ಗೋವಿಂದಸಿಂಹನಿಗೆ ಹದಿನೈದು ವರುಷ. ಅವನು ಶೀಖರ ಗುರುವಾದನು. ಅವನು ಅಜ್ಞಾತವಾಸದಲ್ಲಿದ್ದು ಹಿಂದೀ, ಸಂಸ್ಕೃತ ಮತ್ತು ಫಾರಸಿ ಭಾಷೆಗಳ ಅಭ್ಯಾಸವನ್ನು ಮಾಡಿದನು. ಅವನು ಅಜ್ಞಾತವಾಸವನ್ನು ಮುಗಿಸಿ ಪ್ರಕಟವಾದ ಮೇಲೆ ಮತ್ತೆ ಔರಂಗ ಜೇಬನೊಡನೆ ವಿರೋಧವುಂಟಾಯಿತು. ಶೀಖರು ತಮ್ಮ ಧರ್ಮವನ್ನು ಬಿಟ್ಟು ಮುಸಲ್ಮಾನರಾಗಬೇಕೆಂದು ಔರಂಗಜೇಬನಿಗೆ ಅನಿಸುತ್ತಿದ್ದುದ್ದೇ ಈ ವಿರೋಧಕ್ಕೆ ಕಾರಣ.

ಗುರು ಗೋವಿಂದ ಸಿಂಹನ ಉಪದೇಶಗಳಿಂದ ಶೀಖರಲ್ಲಿ ಸ್ವಧರ್ಮ ಪ್ರೇಮವು ಜಾಗೃತವಾಯಿತು. ಅವನು ತನ್ನ ಶಿಷ್ಯರನ್ನು ಪರೀಕ್ಷಿಸುವದ ಕ್ಕಾಗಿ ವಿಲಕ್ಷಣವಾದ ಯುಕ್ತಿಯನ್ನು ಹೂಡಿದನು. ಸಾವಿರಾರು ಶಿಷ್ಯರು ನೆರೆದಿದ್ದರು. ಅವರೆದುರು ಕತ್ತಿಯನ್ನು ಹಿರಿದು ಸಿಂಹ ಗೋವಿಂದ ಸಿಂಹನು ಪ್ರಶ್ನಿಸಿದನು.

**"ಇದೋ, ನನ್ನ ಕತ್ತಿಯನ್ನು ನೋಡಿರಿ. ದೇವತೆಗೆ ಬಲಿ ಕೊಡುವದಕ್ಕಾಗಿ ಈ ಖಡ್ಗಕ್ಕೆ ಶಿಷ್ಯರು ಬೇಕಾಗಿದ್ದಾರೆ ! ಯಾರು ಸಿದ್ಧರಿದ್ದೀರಿ ? "**

ಆ ಸಭೆಯಲ್ಲಿ ಸರದಾರರಿದ್ದರು, ವ್ಯಾಪಾರಿಗಳಿದ್ದರು, ಒಕ್ಕಲಿಗರಿದ್ದರು. ಗುರುವಿನ ಈ ಪ್ರಶ್ನೆಯನ್ನು ಕೇಳಿ ಸಭೆಯಲ್ಲ ಸ್ತಬ್ಧವಾಯಿತು. ಒಬ್ಬ ವೀರನು ಸಭೆಯಿಂದೆದ್ದು ಮುಂದೆ ಬಂದನು. ಗೋವಿಂದ ಸಿಂಹನು ಅವ ನನ್ನು ವಧಸ್ಥಾನಕ್ಕೆ ಕರೆದೊಯ್ದನು; ಮತ್ತು ಮರುಕ್ಷಣದಲ್ಲಿ ಮರಳಿ ಬಂದನು. ಅವನ ಕತ್ತಿಗೆ ನೆತ್ತರು ಮೆತ್ತಿತ್ತು. ಪುನಃ ಅದೇ ಪ್ರಶ್ನೆಯನ್ನು ಕೇಳಿದನು. ಮತ್ತೊಬ್ಬ ವೀರನು ಎದ್ದು ಬಂದು ಗುರುವನ್ನು ಹಿಂಬಾಲಿಸಿ ದನು. ಹೀಗೆ ಐದು ಸಲ ನಡೆಯಿತು.

ಐದನೆಯ ಬಾರಿ ಬರುವಾಗ ಗೋವಿಂದಸಿಂಹನು ಆ ಐವರನ್ನೂ ಕರೆದುಕೊಂಡು ಬಂದನು. ಆ ಮೇಲೆ ಸಭೆಗೆ ಹೇಳಿದನು. "ನಾನು ನಿಮ್ಮ **ನಿಷ್ಠೆಯನ್ನು ಒರೆಗೆ ಹಚ್ಚಿ ನೋಡಿದೆನು. ಐದು ಕುರಿಗಳನ್ನು**

**ನಾನು ಕೊಂದೆನು. ಈ ಐದು ಜನರು ವೀರಪುರುಷರಿದ್ದಾರೆ. ಇವರು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಾರೆ."**

ಸಭಿಕರಲ್ಲಿ ಹರುಷವು ಉಕ್ಕೇರಿತು. ಇಡೀ ಸಭೆ ಕೂಗಿತು: **"ಸತ್ ಶ್ರೀ ಆಕಾಲ !"**

ಔರಂಗಜೇಬನೊಡನೆ ಕಾದುತ್ತ ಕಾದುತ್ತ ಗುರುವಿನ ಇಬ್ಬರು ಮಕ್ಕಳು ಪ್ರಾಣ ಬಿಟ್ಟರು. ತಾಯಿಯನ್ನೂ ಇಬ್ಬರು ಮಕ್ಕಳನ್ನೂ ಮೊಗಲರ ಗೋಡೆಯೊಳಗೆ ಹುಗಿದರು. ಹೋರಾಟದಲ್ಲಿ ಹಲವಾರು ಶಿಷ್ಯರು ಮಡಿದರು. ಆದುದರಿಂದ ಗುರು ಗೋವಿಂದ ಸಿಂಹನು ದಕ್ಷಿಣಕ್ಕೆ ಬರಬೇಕಾಯಿತು.

ಇವನು ವೀರಲಕ್ಷಣಕ್ಕಾಗಿ ಐದು ಆಯುಧಗಳನ್ನು ಪ್ರತಿಯೊಬ್ಬ ಶೀಖನು ಧರಿಸಲೇಬೇಕೆಂದು ತಮ್ಮ ಮತದವರಕಡೆಯಿಂದ ಪ್ರತಿಜ್ಞೆಯನ್ನು ಮಾಡಿಸಿಕೊಂಡನು. ಆ ಐದು ಚಿನ್ನಗಳು ಕಚ್ಚ, ಕಂಗನ್, ಕಿರಪಾಣ, ಕೇಶ, ಕಂಗವಾ ಇವು ಐದು ಅವರ ಧರ್ಮದ ಚಿನ್ನಗಳು. ಈಗಲಾದರೂ ಶೀಖರು ಇವುಗಳನ್ನು ಧರಿಸಿರುವರು.

ಅಲ್ಲಿಯೂ ಅವನಿಗೆ ಸ್ವಸ್ಥತೆ ದೊರೆಯಲಿಲ್ಲ. ಅವನಿಗೆ ಕೆಲವರು ಮುಸಲ್ಮಾನ ಶಿಷ್ಯರಿದ್ದರು. ಅವರಲ್ಲೊಬ್ಬನು, ಗಾಢವಾದ ನಿದ್ದೆ ಹತ್ತಿ ಮಲಗಿದ ಗುರುವಿನ ಎದೆಗೆ ಚೂರಿಯಿಂದ ಇರಿದನು. ಅವನಿಗೆ ಬಲವಾದ ಗಾಯವಾಯಿತು. ಆ ಸ್ಥಿತಿಯಲ್ಲಿಯೂ ಆವನು ಎದ್ದವನೇ ಕೊಲೆಪಾತಕಿಯನ್ನು ಹೊಡೆದು ಕೊಂದನು. ಮುಂದೆ ಶೀಘ್ರದಲ್ಲಿಯೇ ಅವನೂ ತೀರಿದನು. ಗುರು ಗೋವಿಂದ ಸಿಂಹನು ಸಾಯುವಾಗ ತನ್ನ ಶಿಷ್ಯರಿಗೆ, **"ಇನ್ನು ಹೊಸ ಗುರುಗಳನ್ನು ಮಾಡಿಕೊಳ್ಳುವದು ಬೇಡ. ಗ್ರಂಥಸಾಹೇಬನೇ ನಿಮ್ಮ ಗುರು. ಧರ್ಮದ ಸಲುವಾಗಿ ಜೀವವನ್ನು ಪಣಕಿಟ್ಟು ಹೋರಾಡಿರಿ."** ಎಂದು ಹೇಳಿದನು. **ಗ್ರಂಥಸಾಹೇಬ** ಎಂಬುದು ಶೀಖರ ಧರ್ಮಗ್ರಂಥ.

### — ಅಭ್ಯಾಸ —

೧. ಗೋವಿಂದ ಸಿಂಹನು ತನ್ನ ಶಿಷ್ಯರನ್ನು ಹೇಗೆ ಪರೀಕ್ಷಿಸಿದನು.
೨. ಶೀಖ ಧರ್ಮವನ್ನು ಸ್ಥಾಪಿಸಿದವರು ಯಾರು ?
೩. ಸಾಯುವಾಗ ಗೋವಿಂದ ಸಿಂಹನು ಶಿಷ್ಯರಿಗೆ ಏನು ಹೇಳಿದನು ?
೪. ಶೀಖರ ಆಯುಧಗಳಾವವು.

# ಭಾಗ ೨. ಬಲಶಾಲಿ ಅರಸರು.

## ೧. ಅಶೋಕ

### ಬೌದ್ಧ ಧರ್ಮಾಭಿಮಾನಿ.

"ಎಲ್ಲರೂ ಸತ್ಯ ನ್ಯಾಯ ಪ್ರಾಮಾಣಿಕತನಗಳಿಂದ ನಡೆಯಿರಿ. ತಂದೆತಾಯಿಗಳ, ಗುರುಹಿರಿಯರ ಮಾತುಗಳನ್ನು ಮನ್ನಿಸಿರಿ. ದಾನಧರ್ಮಗಳನ್ನು ಆಚರಿಸಿರಿ. ಪರಧರ್ಮದವರನ್ನು ಆದರಿಸಿರಿ. ಪ್ರಾಣಿಗಳನ್ನು ಕೊಲ್ಲದಿರಿ. ಮದ್ಯಮಾಂಸಗಳನ್ನು ಎಂದೂ ಮುಟ್ಟ ಬೇಡಿರಿ"

ಅಶೋಕನು ಅಲ್ಲಲ್ಲಿ ಕೆತ್ತಿಸಿದ ಶಿಲಾಲೇಖಗಳಿವು.

ನಮ್ಮ ಸ್ವತಂತ್ರ ಭಾರತದ ರಾಷ್ಟ್ರಚಿಹ್ನವನ್ನು ನೋಡಿದ್ದೀರಾ ? ಅದರ ನಡುವೆ ಒಂದು ಚಕ್ರವಿದೆ. ಬಹಳ ಕಾಲದ ಹಿಂದೆ ಈ ದೇಶವನ್ನು ಆಳಿದ **ಅಶೋಕ** ಎಂಬ ರಾಜನ ಗುರುತು ಇದು. ಅವನಂತಹ ದಯಾಳು ಅರಸರು ಬಹಳ ಅಪರೂಪ.





೭. ಅಶೋಕನ ಸ್ತಂಭ    ೮. ಚಕ್ರವರ್ತಿ ಅಶೋಕ    ೯ ಅಶೋಕನ ಚಕ್ರ

**ಪಾಟಲೀಪುತ್ರ** ಎಂಬ ನಗರವು ಆತನ ರಾಜಧಾನಿ. ಈಗ ಬಿಹಾರ ಪ್ರಾಂತದ ಮುಖ್ಯ ಪಟ್ಟಣವಾಗಿರುವ **ಪಾಟಣಾ** ನಗರದ ಹತ್ತಿರ ಈ ರಾಜಧಾನಿಯಿತ್ತು.

ಅಶೋಕನು ಪಟ್ಟವೇರಿ ಕೆಲವೇ ವರುಷಗಳಾಗಿದ್ದವು. ಪಾಟಲೀಪುತ್ರದ ಸಮೀಪದಲ್ಲಿ ಕಲಿಂಗವೆಂಬ ಇನ್ನೊಂದು ರಾಜ್ಯವಿತ್ತು. ಕಲಿಂಗವೆಂದರೆ ಇಂದಿನ ಓರಿಸಾ ಪ್ರಾಂತ. ಆ ರಾಜ್ಯವನ್ನು ತಾನು ಗೆದ್ದುಕೊಳ್ಳಬೇಕೆಂದು ಪರಾಕ್ರಮಶಾಲಿಯಾದ ಅಶೋಕನಿಗೆ ಅನಿಸಿತು. ಆನೆಗಳು, ಕುದುರೆಗಳು. ರಥಗಳು ಮತ್ತು ಕಾಲಾಳುಗಳು ಈ ನಾಲ್ಕು ಬಗೆಯ ಸೇನೆಗಳು ಅವನಲ್ಲಿದ್ದವು. ಅವುಗಳೊಂದಿಗೆ ಅವನು ಕಲಿಂಗದ ಮೇಲೆ ಸಾಗಿ ಹೋದನು. ಆ ದೇಶದ ರಾಜನೂ ಪ್ರಜೆಗಳೂ ಶೂರರೇ ಇದ್ದರು; ಅವರು ಬೇಗನೆ ಸೋಲಲಿಲ್ಲ. ಆದರೆ ಅಶೋಕನ ಬಳಿಯಲ್ಲಿ ದೊಡ್ಡ ಸೇನೆಯಿದ್ದುದರಿಂದ ಕೊನೆಗೆ ಅವನು ಜಯಶಾಲಿಯಾದನು.

ಕಲಿಂಗವನ್ನು ಗೆದ್ದ ಬಳಿಕ ಅಶೋಕನು ಆ ದೇಶದಲ್ಲಿ ಸಂಚಾರಕ್ಕೆ ಹೊರಟನು. ಆಗ ಅವನು ಕಂಡದ್ದೇನು ? ಪ್ರತಿಯೊಂದು ಮನೆಯೊಳಗೂ ಅಳುವ ಧ್ವನಿ ! ಏಕೆಂದರೆ ಆ ಯುದ್ಧದಲ್ಲಿ ಒಂದೊಂದು ಮನೆಯಲ್ಲಿ ಒಬ್ಬನಾದರೂ ಸತ್ತಿದ್ದನು; ಅಲ್ಲಿ ಇಲ್ಲಿ ಕೊಳ್ಳೆ, ಸುಲಿಗೆ ಆಗಿದ್ದುವು; ಇಷ್ಟಲ್ಲದೆ ಬರಗಾಲ ಬೇರೆ ! ಜನರಿಗೆ ಉಣ್ಣಲು ಸಿಗುತ್ತಿರಲಿಲ್ಲ. ಜನರ ಈ ಸ್ಥಿತಿಯನ್ನು ಕಂಡು ಅಶೋಕನ ಮನಸ್ಸು ಮರುಗಿತು. **"ನಾನು ಯುದ್ಧ ಮಾಡಿ ಜನರ ಸಾವು-ನೋವಿಗೆ ಕಾರಣನಾದೆನು. ನನ್ನ ತಪ್ಪಿನಿಂದಲೇ ಈ ಗೋಳು ಉಂಟಾಯಿತು,"** ಎಂದು ಅವನು ಅಂದುಕೊಂಡನು. ಅಂದು ಅವನಿಗೆ ಊಟವು ಸವಿ ಹತ್ತಲಿಲ್ಲ; ನಿದ್ದೆ ಸರಿಯಾಗಿ ಬರಲಿಲ್ಲ. **ರಾಜ್ಯವನ್ನು ದೊರಕಿಸುವದಕ್ಕಾಗಿ ಇನ್ನೆಂದೂ ಯುದ್ಧ ಮಾಡಬಾರದು** ಎಂದು ಅಶೋಕನು ನಿರ್ಧರಿಸಿಕೊಂಡನು.

ಬಳಿಕ ಅವನಿಗೆ ಬೌದ್ಧಧರ್ಮದ ವಿಚಾರಗಳನ್ನು ಅರಿತುಕೊಳ್ಳಬೇಕೆಂದು ಮನಸ್ಸಾಯಿತು. ಒಬ್ಬ ಬೌದ್ಧ ಭಿಕ್ಷುವಿನಿಂದ ಅವನ್ನು ಕೇಳಿ ತಿಳಿದುಕೊಂಡನು. ಅದು ಅವನಿಗೆ ಸರಿಯಾಗಿ ಬಿಂಬಿಸಿತು. ಅದರಿಂದ ಅವನ ಮನಸ್ಸಿಗೆ ಶಾಂತಿಯೂ ಉಂಟಾಯಿತು. ಮುಂದೆ ಆ ತತ್ವಗಳಂತೆಯೇ ರಾಜ್ಯವನ್ನು ಆಳಿದನು.

ತನ್ನ ದೇಶದೊಳಗೆ ಎಲ್ಲಿಯೂ ಪ್ರಾಣಿಗಳನ್ನು ಕೊಲ್ಲಲಾಗದೆಂದು ಅಪ್ಪಣೆ ಹೊರಡಿಸಿದನು. ಅಲ್ಲಲ್ಲಿ ಜನರಿಗಾಗಿಯೂ ದನಗಳಿಗಾಗಿಯೂ ಔಷಧಾಲಯಗಳನ್ನು ತೆರೆದನು. **"ಯಾರೂ ಹಿಂಸೆಯನ್ನು ಮಾಡ**

**ಬಾರದು ! ಸತ್ಯದಿಂದ ನಡೆಯಬೇಕು; ನೆರೆಹೊರೆಯವರಿಗೆ ನೆರವಾಗಬೇಕು;"** ಎಂಬ ಮಾತುಗಳನ್ನು ಕಲ್ಲುಗಳ ಮೇಲೆ ಕೊರೆಯಿಸಿ ಬೀದಿಗಳಲ್ಲಿ ನಿಲ್ಲಿಸಿದನು. ದೂರದೂರದ ದೇಶಗಳಲ್ಲಿ ಬೌದ್ಧಧರ್ಮವನ್ನು ಹರಡುವದಕ್ಕಾಗಿ ಉಪದೇಶಕರನ್ನು ಕಳಿಸಿದನು.

ರಾಜ್ಯಗಳು ಎಷ್ಟೋ ಹುಟ್ಟುವವು, ಬೆಳೆಯುವವು, ಮತ್ತು ಅಳಿಯುವವು. ಇತಿಹಾಸವು ಅವುಗಳನ್ನು ವರ್ಣಿಸುವದು. ಆದರೆ **ಅಶೋಕನು ಬೋಧಿಸಿದ ಮಾನವಧರ್ಮವು ಜನರಿಗೆ ಯಾವಗಲೂ ದಾರಿ ತೋರುತ್ತಿರುವದು.** ಇದೇ ಅವನ ನಿಜವಾದ ಗೆಲುವು.

— ಅಭ್ಯಾಸ —

೧. ಯುದ್ಧ ಮಾಡಬಾರದೆಂದು ಅಶೋಕನು ನಿರ್ಧಾರ ಮಾಡಿದುದು ಏಕೆ ?
೨. ಅವನು ಜನರಿಗೆ ಮಾಡಿದ ಬೋಧವು ಯಾವದು ?



# ೨. ಹರ್ಷ

**"ಹಗೆಗಳನ್ನು ನಾಶಗೊಳಿಸಬೇಕು, ಕಪಟಿಗಳಾದ ಅರಸರನ್ನು ಇಲ್ಲದಂತೆ ಮಾಡಬೇಕು, ಇಡೀ ದೇಶವನ್ನು ತನ್ನ ಅರಸುತನಕ್ಕೆ ಸೇರಿಸಿಕೊಳ್ಳಬೇಕು,"** ಎಂದು ಹರ್ಷನಿಗೆ ಅವನ ಮಂತ್ರಿಗಳು ಸಲಹೆ ಕೊಟ್ಟರು. ಹರ್ಷನು ತೀರ ಎಳೆವಯಸ್ಸಿನ ದೊರೆ; ಪಟ್ಟವೇರಿದಾಗ ಅವನಿಗೆ ಬರಿ ಹದಿನಾರು ವರುಷ. ಮಂತ್ರಿಗಳ ಹೇಳಿಕೆಯಂತೆ ಮಾಡಿದರೆ ದೇಶದಲ್ಲಿ ಶಾಂತತೆಯೂ ಒಳ್ಳೆಯ ವ್ಯವಸ್ಥೆಯೂ ಉಂಟಾಗುವದೆಂದು ಅವನಿಗೂ ಅನಿಸಿತು. ಆಗ ಆತನು ದಂಡನ್ನು ಕೂಡಿಕೊಂಡು ನಾಡುಗಳನ್ನು ಗೆಲ್ಲುವದಕ್ಕೆ ಹೊರಟನು.

ದಿಗ್ವಿಜಯಕ್ಕೆ ಹೊರಡುವ ಮೊದಲು ಹರ್ಷನು ಹಲವು ರಾಜರಿಗೆ ಓಲೆಗಳನ್ನು ಬರೆದನು. **"ನನ್ನ ಒಡೆತನವನ್ನು ನೀವು ಒಪ್ಪಿಕೊಳ್ಳಿರಿ, ಅಂದರೆ ಯುದ್ಧದಿಂದ ಆಗುವ ನಷ್ಟವು ತಪ್ಪುವದು,"** ಎಂದು ಅದರಲ್ಲಿ ತಿಳಿಸಿದನು. ಮತ್ತು ರಾಜಧಾನಿಯಾದ **ಸ್ಥಾನೇಶ್ವರದಿಂದ** ಹೊರಟು,

ಸರಸ್ವತೀನದಿಯ ದಂಡೆಯನ್ನು ತಲುಪಿ, ಅಲ್ಲಿ ಬೀಡುಬಿಟ್ಟನು. ಅಲ್ಲಿಯ ಊರಿನ ಪ್ರಮುಖನು ಹರ್ಷನಿಗೆ ಸ್ವಾಗತ ಮಾಡಿದನು. ಒಂದು ಉಂಗುರವನ್ನು ಕಾಣಿಕೆಯಾಗಿ ಕೊಟ್ಟನು. ರಾಜನು ಅದನ್ನು ಬೆರಳಿಗೆ ಇಟ್ಟುಕೊಳ್ಳುವಾಗ ಅದು ಅವನ ಕೈಯಿಂದ ಜಾರಿ ಕೆಳಗೆ ಬಿದ್ದಿತು. ಅದನ್ನು ಕಂಡು ಹರ್ಷನ ದಂಡಾಳುಗಳಿಗೆ, **'ಮೊದಲು ತುತ್ತಿಗೇ ಹರಳು ಬಂದ ಹಾಗೆ, ಹೊರಡು ವಾಗಲೇ ಅಪಶಕುನವಾಯಿತು. ಗೆಲ್ಲುವದು ಏನೋ ಎಂತೋ,'** ಎಂದು ಅನಿಸಿತು. ಅರಸನು ಚಿಕ್ಕವನಾದರೂ ಬಹಳ ಚತುರ, ಪ್ರಸಂಗಾವ ಧಾನಿ, ಅವನು ಕೆಳಗೆ ಕೆಸರಿನಲ್ಲಿ ಬಿದ್ದಿದ್ದ ಉಂಗುರವನ್ನು ಎತ್ತಿಕೊಂಡು ತನ್ನ ಸೈನಿಕರಿಗೆ ಹೇಳಿದ. **"ಇದೋ ಇದು ಒಳ್ಳೇ ಶುಭವಾದ ಉಂಗುರ; ನನ್ನ ಈ ಉಂಗುರದ ಮುದ್ರೆ ಈ ಭೂಮಿಯಲ್ಲಿ ಎಷ್ಟು ಚೆನ್ನಾಗಿ ಮೂಡಿದೆ! ನಾವು ಹೋದಹೋದಲ್ಲಿ ನಮ್ಮ ವಿಜಯ ಮುದ್ರೆ ಹೀಗೆಯೇ ಮೂಡುವದೆಂಬ ಶುಭದ ಸೂಚನೆ ಇದು!"** ಈ ಮಾತನ್ನು ಕೇಳಿ ಸೈನಿಕರ ನಿರಾಶೆ ಮಾಯವಾಯಿತು. ಅವರಲ್ಲಿ ಹುರುಪು ಉಂಟಾಯಿತು. ಅವರು ಆರು ವರ್ಷಗಳ ವರೆಗೆ ಹಲವು ದೇಶ ಗಳ ಸೈನಿಕರೊಡನೆ ಹೋರಾಡಿದರು. ಪಂಜಾಬದಿಂದ ಬಂಗಾಲದ ವರೆಗಿನ ಉತ್ತರ ಹಿಂದುಸ್ಥಾನದ ಪ್ರದೇಶವನ್ನು ಹರ್ಷನಿಗೆ ಗೆದ್ದುಕೊಟ್ಟರು.

ಹರ್ಷನು ವಿದ್ವಾಂಸನೂ ದಯಾಳುವೂ ಆಗಿದ್ದನು. ಅವನು ಐಯ್ದು ವರುಷಗಳಿಗೊಮ್ಮೆ ತನ್ನ ಸಂಪತ್ತನ್ನೆಲ್ಲ ಬಡವರಿಗೂ ಬ್ರಾಹ್ಮಣರಿಗೂ ಶ್ರಮಣರಿಗೂ ಅಂದರೆ **ಬೌದ್ಧ** ಯತಿಗಳಿಗೂ ಹಂಚುತ್ತಿದ್ದನು. ಅವನ ಆಸ್ಥಾನದೊಳಗೆ **ಬಾಣ ಭಟ್ಟ** ಮತ್ತು **ಜಯಸೇನ** ಎಂಬ ಕವಿಗಳಿದ್ದರು. ಈ ಕಾಲದಲ್ಲಿ ಚೀನ ದೇಶದ **ಹುಎನ್ ತ್ಸಾಂಗ**ನೆಂಬ ಪ್ರವಾಸಿ ಇಲ್ಲಿಗೆ ಬಂದಿದ್ದನು. ಆತನು ಹರ್ಷರಾಜನನ್ನು ಒಳ್ಳೇಯ ರಸಭರಿತವಾಗಿ ಬಣ್ಣಿಸಿ ದ್ದಾನೆ.

## — ಅಭ್ಯಾಸ —

೧. ಹರ್ಷನ ಪ್ರಸಂಗಾವಧಾನವನ್ನು ತೋರಿಸುವ ಪ್ರಸಂಗವು ಯಾವದು ?

೨. ಹರ್ಷನ ಕಾಲದಲ್ಲಿ ಬಂದ ಚೀನೀ ಪ್ರವಾಸಿ ಯಾರು ?



# ೩. ಬಾಬರ

**'ಅತಿಥಿಯೆಂದು ಬಂದವನು ಮನೆಯ ಯಜಮಾನನೇ ಆದನಂತೆ.'**

ಹಿಂದುಸ್ತಾನಕ್ಕೆ ಬಂದ **ಬಾಬರನಿಗೆ** ಈ ಮಾತು ಅನ್ವಯಿಸುತ್ತದೆ. ಹಿಂದುಸ್ತಾನದಲ್ಲಿ ಪಠಾಣರೂ ರಜಪೂತರೂ ತಮ್ಮ ತಮ್ಮೊಳಗೆ ಜಗಳಾಡುತ್ತಿದ್ದರು. ಈ ಇಬ್ಬರ ನ್ಯಾಯ ಮೂರನೆಯವನಿಗೆ ಆಯುವಾಯಿತು. ಪಠಾಣ ರಜಪೂತರ ಜಗಳದಿಂದ ಬಾಬರನು ಲಾಭ ಪಡೆದನು. ಇದು ರಜಪೂತರಿಗೆ ಸಹನವಾಗಲಿಲ್ಲ. ಅವರು ಅತಿ ಶೂರರು, ಮತ್ತು ಅತ್ಯಂತ ಅಭಿಮಾನಿಗಳು. ಅವರು ಒಂದುಗೂಡಿ ಬಾಬರನನ್ನು ಎದುರಿಸಿದರು.


೧೦. ಬಾಬರ

ಬಾಬರನಾದರೂ ಮಾಡಿದ ನಿಶ್ಚಯವನ್ನು ಬಿಡದ ಗಟ್ಟಿಗನು. **ಕಾಬೂಲವನ್ನು** ಗೆದ್ದ ಬಳಿಕ ಅವನು ಹಿಂದುಸ್ತಾನಕ್ಕೆ ಬಂದನು. ಪಾನಿಪತ್ತಿನಲ್ಲಾದ ಮೊದಲನೆಯ ಸಂಗ್ರಾಮದಲ್ಲಿ ದಿಲ್ಲಿಯನ್ನು ಗೆದ್ದುಕೊಂಡನು. ದಿಲ್ಲಿಯ ವೈಭವವನ್ನು ಕಂಡು ಬಾಬರನ ಮನಸ್ಸು ಮುಗ್ಧವಾಯಿತು.

ರಜಪೂತ ವೀರನಾದ **ರಾಣಾ ಸಂಗನು** ಮೊಗಲ ಬಾದಶಹನಾದ ಬಾಬರನ ಮೇಲೆ ಸಾಗಿ ಬಂದನು. ಬಾಬರನು ಅವನನ್ನು ಶಿಕ್ರಿ ಎಂಬಲ್ಲಿ ಎದುರಿಸಿದನು. ಅಲ್ಲಿ ಭಯಂಕರವಾದ ಯುದ್ಧವಾಯಿತು. ತೋಪುಗಳ ಗರ್ಜನೆಯಿಂದ ದಿಕ್ಕುಗಳೂ ಗಡಗಡಿಸಿದವು. ರಜಪೂತ ಸೈನ್ಯದ ಕಲಿತನದ ಮುಂದೆ ಮೊಗಲ ದಂಡು ತತ್ತರಿಸಿತು. ಆ ದಂಡಾಳುಗಳು ಕೆಟ್ಟೆವೆಂದು ಹಿಮ್ಮೆಟ್ಟಿ ಓಡತೊಡಗಿದರು. ಬಾಬರನಿಗೆ ಯೋಚನೆಯುಂಟಾಯಿತು. ಆದರೆ ಆ ಧಿಟ್ಟನು ಎದೆಗುಂದಲಿಲ್ಲ. ರಣಭೂಮಿಯಿಂದ ಓಡಿಬಂದ ತನ್ನ ಸೈನಿಕರನ್ನು ಪುನಃ ಹುರಿದುಂಬಿಸಿದನು. ಅವರನ್ನು ಕುರಿತು ಅವನು ಅಂದದ್ದು—

**"ಗಾಬರಿಯಿಂದ ಕೈಕಾಲುಗೆಡಬೇಡಿರಿ; ಗಂಡುಗಲಿಗಳಾಗಿರಿ! ಇದು ಧರ್ಮಯುದ್ಧವು. ಮನುಷ್ಯನಿಗೆ ಸಾವು ಒಮ್ಮಿಲ್ಲೊಮ್ಮೆ ಬರತಕ್ಕದ್ದೇ. ವೀರನು ಸಾವಿಗೆ ಹೆದರಲಾಗದು. ಹೋರಾಡುತ್ತ ಬರುವ ಸಾವು ಉತ್ತಮವಾದದ್ದು. ನಾನು ಮಹಾಪಾಪಿ:— ಈ**

ವರೆಗೆ ಬೇರೆ ಬೇರೆ ರಾಜ್ಯಗಳನ್ನು ಗೆಲ್ಲುವದಕ್ಕಾಗಿ ಕಾಳಗದಲ್ಲಿ ನಾನು ಬಹಳ ಜನರನ್ನು ಕೊಂದೆ, ಮತ್ತು ಕೊಲ್ಲಿಸಿದೆ. ಆದರೆ ಇಂದಿನ ಯುದ್ಧವು ರಾಜ್ಯವನ್ನು ಪಡೆಯುವದಕ್ಕಾಗಿ ಅಲ್ಲ; ಈಗ ಕಾದುವದು ಧರ್ಮದ ಸಲುವಾಗಿ. ವೀರರೇ, ನಮ್ಮಲ್ಲಿರುವ ಎಲ್ಲ ಕೆಟ್ಟ ಚಟಗಳನ್ನೂ ಬಿಟ್ಟುಬಿಡುವ ಸಂಕಲ್ಪ ಮಾಡುವಾ. ಆ ಕೆಟ್ಟ ಅಭ್ಯಾಸಗಳನ್ನು ಅಲ್ಲಾನ ಆಣೆಯಿಟ್ಟುಕೊಂಡು ಇಂದಿನಿಂದಲೇ ತ್ಯಜಿಸೋಣ; ಮತ್ತು ಒಳ್ಳೆಯ ರೀತಿಯಿಂದ ನಡೆಯಲು ನಿಶ್ಚಯ ಮಾಡೋಣ. ಇದೋ ನಾನು ಕುರಾನವನ್ನು ಮುಟ್ಟಿ ಶಪಥ ಮಾಡುತ್ತೇನೆ. "ಇನ್ನು ಮೇಲೆ ನಾನು ಸೇಂದಿಯನ್ನು ಕುಡಿಯುವದಿಲ್ಲ; ನಾನಿನ್ನು ಖಂಡಿತವಾಗಿಯೂ ವಿಜಯಶಾಲಿಯಾಗುತ್ತೇನೆ. ಪುರುಷರ ಸಾಹಸಕ್ಕೆ ದೇವರ ಸಹಾಯವುಂಟು!"

ಬಾಬರನ ಧೀರವಾಣಿಯಿಂದ ಸೈನಿಕರಲ್ಲಿ ಮತ್ತೆ ಸಾಹಸವು ತುಂಬಿತು; ಉತ್ಸಾಹವು ಉಕ್ಕಿತು. ಮದ್ಯದ ಭಾಂಡಿಗಳನ್ನು ಒಡೆದರು, ಪೇಲೆಗಳನ್ನು ತೂರಾಡಿದರು. ದಂಡಿನ ಬೀಡಿನಲ್ಲಿ ಮದ್ಯದ ಹೊಳೆ ಹರಿಯಿತು. ಪ್ರತಿಯೊಬ್ಬ ಸೈನಿಕನೂ ಕುರಾನವನ್ನು ಹಿಡಿದು "ಸಾಯುವವರೆಗೂ ಹೋರಾಡುವೆನು" ಎಂದು ಶಪಥ ಮಾಡಿದನು.

ಈ ಹೊಸಹುರುಪಿನಿಂದ ಮುಂದಿನ ಕಾಳಗವು ಘನಘೋರವಾಯಿತು. ರಾಣಾಸಂಗನಿಗೆ ಸೋಲಾಯಿತು. ಬಾಬರನು ಗೆದ್ದನು. ಬಳಿಕ ಅವನು ಶಿಕ್ರಿಗೆ ಫತ್ತೇಪೂರ ಎಂದು ನಾಮಕರಣ ಮಾಡಿದನು.

ಸಾವಿರಾರು ಕುಡುಕರನ್ನು ಒಂದೇ ಒಂದು ಕ್ಷಣದಲ್ಲಿ ಮದ್ಯದ ಚಟದಿಂದ ಬಿಡುಗಡೆ ಹೊಂದಿದ ಫತ್ತೇಪೂರವೂ ಅದಕ್ಕೆ ಕಾರಣನಾದ ಬಾಬರನೂ ಚಿರಸ್ಮರಣೀಯರಾಗಿದ್ದಾರೆ.

## — ಅಭ್ಯಾಸ —

೧. ಶಿಕ್ರಿಯುದ್ಧದ ಮಹತ್ವವೇನು?
೨. ದಿಲ್ಲಿಯಲ್ಲಿ ಮೊಗಲ ರಾಜ್ಯವನ್ನು ಸ್ಥಾಪಿಸಿದವರು ಯಾರು?
೩. ಶಿಕ್ರಿಯುದ್ಧದಲ್ಲಿ ಗೆಲವು ದೊರಕಿಸಲು ಬಾಬರನು ಏನು ಮಾಡಿದನು?

## ೪. ಅಕಬರ

### ಹಿಂದು, ಮುಸಲ್ಮಾನರಲ್ಲಿ ಐಕ್ಯಭಾವವನ್ನು ತರಲೆತ್ನಿಸಿದ ಮಹಾಪುರುಷ.

**ಹಿಂದುಸ್ತಾನದಲ್ಲಿರುವವರೆಲ್ಲರೂ ಹಿಂದುಗಳೇ ಅವರಲ್ಲಿ ಹಿಂದು, ಮುಸಲ್ಮಾನ ಎಂದು ಬೇಧ ಮಾಡಬಾರದು. ಎಲ್ಲರಿಗೂ ಒಂದೇ ಧರ್ಮ; ಒಬ್ಬನೆ ದೇವರು. ಎಲ್ಲರೂ ಪ್ರೀತಿಯಿಂದ ಒಕ್ಕಟ್ಟಿರಬೇಕು. ದೇಶಕ್ಕಾಗಿ ದುಡಿಯುಬೇಕು; ಅದಕ್ಕಾಗಿ ಮಡಿಯುಬೇಕು.**

ಅಕಬರನ ಉದ್ಗಾರಗಳಿವು.

**ಅಕಬರನ** ತಂದೆ ಮೊಗಲಬಾದಶಹನಾದ **ಹುಮಾಯೂನ.** ತನ್ನ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ದಿಲ್ಲಿಯನ್ನು ಬಿಟ್ಟೋಡಬೇಕಾಯಿತು. ಇಂತಹ ಸಂಕಟಕಾಲದಲ್ಲಿ ಸಿಂಧಪ್ರಾಂತದ **ಉಮರಕೋಟೆ** ಎಂಬಲ್ಲಿ ಅಕಬರನು ಜನಿಸಿದನು. ಈ ದುಃಸ್ಥಿತಿಯಲ್ಲಿಯೂ ಹುಮಾಯೂನನ ಹತ್ತಿರ ಕಸ್ತೂರಿಯಿತ್ತು. ಅಕಬರನು ಹುಟ್ಟಿದಾಗ ಹುಮಾಯೂನನು ತನ್ನ ಜೊತೆಯಲ್ಲಿದ್ದ ಕಸ್ತೂರಿಯನ್ನು ಹಂಚಿ **"ಇದರ ಸುವಾಸನೆಯಂತೆ ಈ ಹುಡುಗನ ಕೀರ್ತಿ ಹಬ್ಬಲಿ!"** ಎಂದು ಅನ್ನತ್ತಿದ್ದನು. ಮುಂದೆ ಅವನ ಈ ಹಾರೈಕೆ ಸತ್ಯವೇ ಆಯಿತು. ದಿಲ್ಲಿಯ ಬಾದಶಹರಲ್ಲೆಲ್ಲ ಅಕಬರನೇ ಶ್ರೇಷ್ಠನೆಂದು ಹೆಸರಾದನು.

ಅಕಬರನು **ಬಹರಾಮಖಾನನೆಂಬ** ಸರದಾರನ ಸಹಾಯದಿಂದ, ದಿಲ್ಲಿಯ ಸಿಂಹಾಸನವನ್ನು ಹಿಮೂವಿನಿಂದ ಕಿತ್ತು ಕೊಂಡನು. ಆಗ ಅವನು ಚಿಕ್ಕವನಿದ್ದನು. ರಾಜ್ಯದ ಆಡಳಿತವನ್ನು ಆ ಖಾನನೇ ನೋಡಿಕೊಳ್ಳುತ್ತಿದ್ದನು. ಅಕಬರನು ದೊಡ್ಡವನಾದ ಮೇಲೆಯೂ ಅವನೇ ಕಾರಭಾರವನ್ನು ಸಾಗಿಸುತ್ತಿದ್ದನು; ಆಗ ಅಕಬರನು ಒಂದು ಹಂಚಿಕೆಯನ್ನು ಹೂಡಿದನು. ಒಮ್ಮೆ ಬೇಟೆಯ ನೆವದಿಂದ ಒಬ್ಬನೇ ಹೊರಟು **ಆಗ್ರಾದ** ವರೆಗೆ ಹೋದನು. ಅಲ್ಲಿಂದಲೇ ಅಕಬರನು ಬಹರಾಮಖಾನನಿಗೆ ಒಂದು ಆದೇಶವನ್ನು ಕಳಿಸಿದನು. **"ಇನ್ನು ಎಲ್ಲ ಕಾರಭಾರವನ್ನು ನಾನೇ**



೧೧. ಅಕಬರ

**ನೋಡಿ ಕೊಳ್ಳುತ್ತೇನೆ. ನೀವು ಮಕ್ಕಾಯಾತ್ರೆಗೆ ಹೊರಟು ಹೋಗಿರಿ,"** ಎಂದ ತಿಳಿಸಿದ. ಖಾನನು ಮೊದಲು ಕೊಂಚ ಕುರಕುರಿ ಮಾಡಿದನು; ಆದರೆ ಕೊನೆಗೆ ಬಾದಶಹನ ಅಪ್ಪಣೆಯನ್ನು ಮಾನ್ಯ ಮಾಡಿದನು. ಇದರಿಂದ ಇತರ ಸರದಾರರ ಮೇಲೆ ಅಕಬರನ ವರ್ಚಸ್ಸು ಚನ್ನಾಗಿ ಬಿದ್ದಿತು.

ಯಾವ ಕೆಲಸವನ್ನೇ ಆಗಲಿ, ಮಾಡಬೇಕೆಂದು ನಿರ್ಧಾರವಾದೊಡನೆ ಮಾಡಿಬಿಡುವದರಲ್ಲಿ ಅಕಬರನು ಬಹಳ ಕುಶಲನಾಗಿದ್ದನು. ಒಮ್ಮೆ ಗುಜರಾಥದಲ್ಲಿ ಬಂಡಾಯವೆದ್ದಿದೆ ಎಂಬ ಸುದ್ದಿ ಅವನ ಕಿವಿಗೆ ಬಿದ್ದಿತು, ಆ ಬಂಡನ್ನು ಅಡಗಿಸುವದಕ್ಕಾಗಿ ಅವನು ಕೆಲ ದಂಡನ್ನು ಕಳಿಸಿದನು. ಇಷ್ಟಕ್ಕೇ ಅವನು ಸ್ವಸ್ಥವಾಗಿ ಕುಳಿತುಕೊಳ್ಳಲಿಲ್ಲ. ಆರಿಸಿದ ಮೂರು ನೂರು ಜನರನ್ನು ತೆಗೆದುಕೊಂಡು ಅಶ್ವಾರೋಹಿಯಾಗಿ ಅಕಬರನು ತಾನೂ ಹೊರಟನು. ಆಗ್ರಾದಿಂದ ಅಹಮದಾಬಾದು ಆರು ನೂರು ಮೈಲು ದೂರವಿದೆ. ಅದು ಬೇಸಿಗೆಯ ಕಾಲ. ಅಲ್ಲದೆ ರಜಪೂತಸ್ಥಾನದ ಮರುಭೂಮಿಯಲ್ಲಿ ಹಾಯ್ದು ಹೋಗಬೇಕಾಗಿತ್ತು. ಆದರೂ ಹನ್ನೊಂದೇ ದಿನಗಳಲ್ಲಿ ಅಹಮದಾಬಾದವನ್ನು ತಲುಪಿಸಿದನು. ಮತ್ತು ಆ ಕ್ಷಣವೇ ಬಂಡುಗಾರರು ಕಕ್ಕಾವಿಕ್ಕಿಯಾದರು. ಬಂಡು ತಣ್ಣಗಾಯಿತು. ದಿಲ್ಲಿಯಿಂದ ದಂಡು ಬರುವದಕ್ಕೆ ಎರಡು ಮೂರು ತಿಂಗಳು ಬೇಕೆಂದು ಬಂಡುಗಾರರು ತಿಳಿದುಕೊಂಡಿದ್ದರು.

ಅಕಬರನು ಉದಾರ ಮನಸ್ಸಿನವನು ಮತ್ತು ಚತುರನು. ರಜಪೂತರೊಡನೆ ಆದ ಯುದ್ಧಗಳಲ್ಲಿ ಅವರು ಬಹಳ ಶೂರರೆಂಬುದನ್ನು ಅಕಬರನು ಮನಗಂಡನು. ಅವರಿಗೆ ಅಧಿಕಾರದ ಸ್ಥಾನಗಳನ್ನು ಕೊಟ್ಟು ಅವರ ಗೆಳೆತನವನ್ನು ಸಂಪಾದಿಸಿಕೊಂಡನು. ಹಿಂದಿನ ಬಾದಶಹರು ಹಿಂದುಗಳ ಮೇಲೆ ಹೇರಿದ್ದ 'ಜಿಜಿಯಾ' ಎಂಬ ಕರವನ್ನು ಅಕಬರನು ತೆಗೆದುಹಾಕಿದನು. ಇದರಿಂದ ಹಿಂದುಗಳಲ್ಲಿ ಅವನ ಬಗ್ಗೆ ಪ್ರೀತಿಯುಂಟಾಯಿತು. ಅವರು ಆತನ ಸಾಮ್ರಾಜ್ಯವನ್ನು ಬೆಳೆಸುವದಕ್ಕೆ ತುಂಬಾ ಸಹಾಯ ಮಾಡಿದರು. ಹೀಗೆ ಸಹಾಯ ಮಾಡಿದವರಲ್ಲಿ ರಾಜಾ ಮಾನಸಿಂಹನು ಮುಖ್ಯನು.

ಹಿಂದೂ, ಮುಸಲ್ಮಾನ, ಕ್ರೈಸ್ತ, ಫಾರಶೀ ಮೊದಲಾದ ಎಲ್ಲ ವರ್ಗಗಳ ಪಂಡಿತರೊಡನೆಯೂ ಅಕಬರನು ಬಿಚ್ಚು ಮನಸ್ಸಿನಿಂದ ಚರ್ಚೆ ಮಾಡುತ್ತಿದ್ದನು. ಅದಕ್ಕಾಗಿ ಫತ್ತೇಪೂರದ ಅರಮನೆಯೊಳಗಿನ ಒಂದು ಸಭಾಮಂದಿರ

ವನ್ನು ಕಾಯ್ದಿಟ್ಟಿದ್ದನು. ಪ್ರತಿ ಶುಕ್ರವಾರವೂ ಧಾರ್ಮಿಕ ಚರ್ಚೆ ನಡೆಯು ತ್ತಿತ್ತು. ಈ ಕಾರ್ಯದಲ್ಲಿ **ಅಬುಲಫಜಲ** ಎಂಬ ಮಂತ್ರಿಯ ನೆರವು ಅವನಿಗೆ ವಿಶೇಷವಾಗಿ ಸಿಕ್ಕಿತು. ಇದಲ್ಲದೆ ಅಕಬರನ ಆದಳಿತಗಾರರ ವರ್ಗದಲ್ಲಿ **ರಾಜಾ ತೊಡರಮಲ್ಲ, ಬದಾವುನಿ, ಬೀರಬಲ್** ಎಂಬವರಿದ್ದರು. ಜಗತ್ತಿನಲ್ಲಿಯ ದೊಡ್ಡ ರಾಜ್ಯಕರ್ತರಲ್ಲಿ ಅಕಬರನನ್ನು ಎಣಿಸಲಾಗುತ್ತದೆ.

**— ಅಭ್ಯಾಸ —**

೧. ಅಕಬರನು ತನ್ನ ಆಳಿಕೆಯಲ್ಲಿ ಯಾವ ಧೋರಣವನ್ನು ಇಟ್ಟುಕೊಂಡಿದ್ದನು?
೨. ಅಕಬರನ ದರಬಾರದಲ್ಲಿಯ ಕೆಲವು ಸರದಾರರ ಹೆಸರುಗಳನ್ನು ಹೇಳಿರಿ.
೩. ಅಕಬರ ಬೀರಬಲ್ಲರ ಒಂದು ಕಥೆಯನ್ನು ಗುರುಗಳಿಂದ ಕೇಳಿರಿ.



# ೫. ಶಹಾಜಹಾನ

## ಸುವರ್ಣಯುಗದ ಸವಿಯನ್ನುಂಡ ಸುಖಪುರುಷ.

ಜಗತ್ತಿನಲ್ಲಿಯೆ ಹೆಚ್ಚು ಸುಂದರವಾದ ಕಟ್ಟಡವು ಯಾವದು ಬಲ್ಲಿರಾ! **ತಾಜಮಹಾಲು.** ಉತ್ತರ ಹಿಂದುಸ್ತಾನದೊಳಗೆ **ಆಗ್ರಾ** ಪಟ್ಟಣದಲ್ಲಿ ಈ ಕಟ್ಟಡವಿದೆ. ಯಮುನಾ ನದಿಯ ಧಡದಲ್ಲಿ ಈ ಭವ್ಯವಾದ ಮಂದಿರವು ಶೋಭಿಸುತ್ತಿದೆ. ಈ ಮಹಾಲನ್ನು ಕಟ್ಟುವದಕ್ಕೆ ಇಪ್ಪತ್ತು ವರುಷಗಳು ಹಿಡಿದವು; ದಿನಾಲು ಇಪ್ಪತ್ತುಸಾವಿರ ಜನರು ದುಡಿದರು. ಅದರ ಗೋಡೆ ಗಳಿಗೆ ಬಿಳಿಯ ಸಂಗಮರವರಿಕಲ್ಲುಗಳನ್ನು ಬಳಸಲಾಗಿದೆ; ಅದರ ನೆಲಗಟ್ಟೂ ಅದೇ ಕಲ್ಲಿನದು. ಗೋಡೆಗಳಿಗೆ ರತ್ನಗಳನ್ನು ಕೆಚ್ಚಿದ್ದಾರೆ. ಮುಖ್ಯ ಕಟ್ಟಡದ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಎತ್ತರವಾದ ಕಂಬಗಳಿವೆ. ಅವು ಎತ್ತರದಲ್ಲಿ ಒಂದುನೂರಾಇಪ್ಪತ್ತೈದು ಅಡಿಗಳನ್ನು ಮೀರಿವೆ. ಈ ಸಂಗಮರವರೀ ಕಲ್ಲಿನ ಕಟ್ಟಡದ ಸೊಬಗು ಬೆಳುದಿಂಗಳ ರಾತ್ರಿಯಲ್ಲಿ ನೋಡುವವರ ಕಣ್ಣುಗಳಿಗೆ ಹಬ್ಬವನ್ನು ಉಂಟು ಮಾಡುವದು. ಈ ವೈಭವದ ಕಟ್ಟಡವನ್ನು ಕಟ್ಟಿಸಿದವನು ಮೊಗಲ ಚಕ್ರವರ್ತಿಯಾದ **ಶಹಾಜಹಾನನು.**



ಶಹಾಜಹಾನನು ಅಕಬರ ಬಾದಶಹನ ಮೊಮ್ಮಗನು. **ಮುಮತಾಜ** ಎಂಬವಳು ಶಹಾಜಹಾನನ ಪ್ರೀತಿಯ ಹೆಂಡತಿ. ಆಕೆಯ ಹೆಸರನ್ನು ಧರಿಸಿದ ಈ ಕಟ್ಟಡವು "ತಾಜ ಮಹಾಲು" ಎನಿಸಿದೆ. ಈ ಮಹಾಲಿನಲ್ಲಿ ಮುಮತಾಜಳ ಗೋರಿಯಿದೆ. ಶಹಾಜಹಾನನು ತೀರಿಕೊಂಡ ತರುವಾಯ ಅವನ ಶವವನ್ನೂ ಅಲ್ಲಿಯೇ ದಫನಮಾಡಲಾಯಿತು.

೧೨. ಶಹಾಜಹಾನ

ಮೊಗಲ ರಾಜ್ಯವು ವೈಭವದ ಶಿಖರವನ್ನು ಮುಟ್ಟಿದ್ದು ಶಹಾಜಹಾನನ ಕಾಲದಲ್ಲಿ. ಈತನು ಅತ್ಯಂತ ಕಲಾಪ್ರೇಮಿ. ತನ್ನ ಹೆಂಡತಿಯ ನೆನಪಿಗಾಗಿ ಕಟ್ಟಿಸಿದ ಮಹಾಲಲ್ಲದೆ, ದಿಲ್ಲಿಯ **ಕೆಂಪು ಕೋಟೆ, ದಿವಾಣ-ಇ-ಆಮ, ದಿವಾಣ-ಇ- ಖಾಸ** ಎಂಬ ಹೆಸರಾದ ಕಟ್ಟಡಗಳನ್ನು ಈತನು ಕಟ್ಟಿಸಿದನು. ಸುಮಾರು ಏಳೆಂಟು ಕೋಟಿ ರೂಪಾಯಿ ಬೆಲೆಬಾಳುವ ಒಂದು ಸಿಂಹಾಸನವನ್ನು ಮಾಡಿಸಿದನು. "**ಮಯೂರ ಸಿಂಹಾಸನ**"ವೆಂದು ಇದನ್ನು ಕರೆಯುವರು.

ಮುಪ್ಪಿನ ವಯಸ್ಸಿನಲ್ಲಿ ಮಾತ್ರ ಶಹಾಜಹಾನನ ದೈವ ಕೆಟ್ಟಿದ್ದಾಗಿತ್ತು. ಈತನ ಮಗನಾದ ಔರಂಗಜೇಬನು ಮುದುಕ ತಂದೆಯನ್ನು ಸೆರೆಯಲ್ಲಿಟ್ಟು ತಾನು ದೊರೆಯಾದನು. ಮುದುಕನು ಎಂಟು ವರುಷಗಳನ್ನು ಆಗ್ರಾ ಕೋಟೆಯೊಳಗೆ ಸೆರೆಯಾಳಾಗಿ ಕಳೆದನು. ಮತ್ತು ಅಲ್ಲಿಯೇ ಅವನ ಅಂತ್ಯವಾಯಿತು. ಶಹಾಜಹಾನನು ಸೆರೆಯಿದ್ದ ಸ್ಥಳದಿಂದ ತಾಜಮಹಾಲು ಕಾಣುತ್ತಿತ್ತು. ಆ ತಾಜಮಹಾಲನ್ನು ನೋಡುತ್ತಲೇ ಅವನು ಜೀವಬಿಟ್ಟನು.



೧೩. ಮಮತಾಜಬೇಗಂ

## — ಅಭ್ಯಾಸ —

೧. ತಾಜಮಹಾಲನ್ನು ಬಣ್ಣಿಸಿರಿ.

೨. ಶಹಾಜಹಾನನು ಮಾಡಿದ ಕಲಾಕೌಶಲ್ಯದ ಬೇರೆ ಕೆಲಸಗಳು ಯಾವವು?



# ೬. ಛತ್ರಪತಿ ಶಿವಾಜಿ

## ಮರಾಠರ ರಾಜ್ಯವನ್ನು ಸ್ಥಾಪಿಸಿ ಅದನ್ನು ಬೆಳಕಿಗೆ ತಂದ ಪ್ರಥಮ ಪುರುಷ.

ಮಹಾರಾಷ್ಟ್ರದಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ ಶಿವಾಜಿ ಮಹಾರಾಜನ ತಂದೆ **ಶಹಾಜಿ; ತಾಯಿ ಜೀಜಾಬಾಯಿ.** ಅವನು ಚಿಕ್ಕವನಿದ್ದಾಗ ಅವನ ತಾಯಿಯಿಂದ ಅವನಿಗೆ ಒಳ್ಳೆಯ ಶಿಕ್ಷಣವು ದೊರೆಯಿತು. ಆಕೆ ಮಗನಿಗೆ **ಶ್ರೀ ರಾಮಚಂದ್ರನ** ಹಾಗೂ **ಅರ್ಜುನನ** ಕಥೆಗಳನ್ನು ಹೇಳುತ್ತಿದ್ದಳು. ಕೊನೆಗೆ ಸತ್ಯಕ್ಕೇ ಗೆಲವಾಗುವದೆಂಬುದು ಅವನ ಮನಸ್ಸಿನಲ್ಲಿ ಚನ್ನಾಗಿಯೇ ಬಿಂಬಿಸಿತ್ತು. ಎಂತಹ ಪ್ರಸಂಗದಲ್ಲಿಯೂ ನಿರಾಶನಾಗದ ಗುಣವು ಅವನಲ್ಲಿ ಮನೆಮಾಡಿತ್ತು; ಎಂತಹ ಹಿರಿಮೆ ಬಂದಾಗಲೂ ಗರ್ವದಿಂದ ಉಬ್ಬದ ಸ್ವಭಾವವು ಅವನಲ್ಲಿ ಮೈಗೂಡಿತ್ತು. ಸ್ವರಾಜ್ಯವನ್ನು ದೊರಕಿಸುವದಕ್ಕಾಗಿ ಶಿವಾಜಿ ಶತ್ರುಗಳೊಡನೆ ಹಗಲಿರುಳೂ, ಕಾದಾಡಬೇಕಾಯಿತು. ಅದಕ್ಕೆ ತಕ್ಕ ಶೂರತನವೂ ದೃಢಮನಸ್ಸೂ ಅವನಿಗಿದ್ದವು.



೧೪. ಛತ್ರಪತಿ ಶಿವಾಜಿ

**ಹಣ್ಣಿನ ಗುಣ ಹೀಚಿನಲ್ಲಿ ಕಾಣುವವಂತೆ.** ತನ್ನ ಧರ್ಮದ ಬಗ್ಗೆ ಅವನ ಅಭಿಮಾನವು ಬಾಲ್ಯದಿಂದಲೇ ಕಂಡುಬರುತ್ತಿತ್ತು. ಅವನ ತಂದೆ ಶಹಾಜಿ ವಿಜಾಪುರದ ಬಾದಶಹನ ಸರದಾರನಾಗಿದ್ದನು. ಒಮ್ಮೆ ತಂದೆಯೊಡನೆ ಶಿವಾಜಿ ವಿಜಾಪುರಕ್ಕೆ ಹೋಗಿದ್ದನು. ಆಗ ಒಂದು ದಿವಸ ಅವನು ಬೀದಿಯಲ್ಲಿ ನಡೆದಿದ್ದನು. ಆ ತುಂಬಿದ ಬೀದಿಯಲ್ಲಿಯೇ ಕೆಲ ಜನ ಮುಸಲ್ಮಾನರು ಆಕಳನ್ನು ಕೊಲ್ಲುತ್ತಿರುವದು ಅವನಿಗೆ ಕಾಣಿಸಿತು. ಅದನ್ನು ನೋಡಿ ಅವನಿಂದ ಸುಮ್ಮನಿರುವದು ಆಗಲಿಲ್ಲ.

“ಆಕಳನ್ನು ಏಕೆ ಕೊಲ್ಲುತ್ತೀರಿ ? **ಆಕಳು ಹಿಂದುಗಳ ದೇವರು!**” ಎಂದು ಅವರನ್ನು ದಿಟ್ಟತನದಿಂದ ಕೇಳಿದನು.

“ನೀನು ಯಾರು ? ನಮ್ಮನ್ನು ಕೇಳುವದಕ್ಕೆ ! ನಾವು ಕೊಲ್ಲುವವರೇ!” ಎಂದು ಒಬ್ಬ ಖಾನನು ಉತ್ತರ ಕೊಟ್ಟನು.

ಆಗ ಶಿವಾಜಿಯು ಅವನ ಕೈಯನ್ನು ಹಿಡಿದನು. ಇದರಿಂದ ಕೊಂಚಗೊಂದಲವೇ ಉಂಟಾಯಿತು. ಆಕಳಿನ ಜೀವವು ಉಳಿಯಿತು ಮಗನ ಈ

ಬಗೆಯ ನಡತೆಯನ್ನು ಕಂಡು ಶಹಾಜಿ ಅವನನ್ನು ಈ ಊರಲ್ಲಿ ಇಟ್ಟುಕೊಳ್ಳು ವದು ಬೇಡವೆಂದು ಕೂಡಲೆ ಪುಣೆಗೆ ಕಳಿಸಿದನು.

ಶಿವಾಜಿ ಅಭಿಮಾನಿಯಿದ್ದಂತೆ ಒಳ್ಳೆಯ ಹಂಚಿಕೆಗಾರನೂ ಹೌದು. ಒಮ್ಮೆ ಬಾದಶಹನನ್ನು ಕಾಣುವದಕ್ಕಾಗಿ ಅವನು ಆಗ್ರಾಕ್ಕೆ ಹೋಗಿದ್ದನು. ಆ ಕಾಲದಲ್ಲಿ ಶಹಾಜಹಾನನ ಮಗನಾದ ಔರಂಗಜೇಬನು ಬಾದಶಹನಾಗಿ ದ್ದನು. ಅವನು ಶಿವಾಜಿಯನ್ನು ವಂಚಿಸಿದನು; ಮತ್ತು ಅವನಿದ್ದ ಮನೆ ಯಲ್ಲಿಯೇ ಅವನನ್ನು ಸೆರೆಹಿಡಿದಿಟ್ಟನು. ಇದರಿಂದ ಶಿವಾಜಿಯೇನೂ ಎದೆ ಗುಂದಲಿಲ್ಲ. ತನಗೆ ಜಡ್ಡಾಗಿದೆ ಎಂದು ಸೋಗಿನ ಆಟ ಹೂಡಿದನು. ತನಗೆ ಗುಣವಾಗಬೇಕೆಂದು ಸಾಧು ಸಂತರಿಗೂ ಫಕೀರರಿಗೂ ಮಿಠಾಯಿ ಯನ್ನು ಕಳಿಸಿಕೊಡಲು ಮೊದಲುಮಾಡಿದನು. ದಿನಾಲು ದೊಡ್ಡ ದೊಡ್ಡ ಪೆಟ್ಟಿಗೆಗಳನ್ನು ಮಿಠಾಯಿತುಂಬಿ ಹೊರಗೆ ಕಳಿಸುತ್ತಿದ್ದನು. ಕೆಲವು ದಿನ ಗಳ ಮೇಲೆ ಆತನ ಹಂಚಿಕೆಗೆ ಸರಿಯಾದ ಸಮಯ ಬಂದಿತು. ಅವನ ಮಗ ಸಂಭಾಜಿಯೂ ಅವನ ಜೊತೆಯಲ್ಲಿದ್ದನು. ಒಂದು ದಿನ ಅವನನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ. ತಾನೊಂದು ಪೆಟ್ಟಿಗೆಯಲ್ಲಿ ಕುಳಿತುಕೊಂಡನು. ಎಂದಿನಂತೆ ಆ ಪೆಟ್ಟಿಗೆಗಳನ್ನು ಹೊರಗೆ ಒಯ್ಯಲಾಯಿತು. ಮೊದಮೊದಲು ಕಾವಲುಗಾರರು ಪೆಟ್ಟಿಗೆಗಳನ್ನು ಶೋಧಿಸಿ ಬಿಡುತ್ತಿದ್ದರು. ಈಗೀಗ ಮಿಠಾ ಯಿಯೇ ಎಂಬ ನಂಬಿಕೆಯಿಂದ ಹಾಗೆಯೇ ಬಿಡುತ್ತಿದ್ದರು; ಅಂದೂ ಬಿಟ್ಟರು. ಶಿವಾಜಿ ಸುರಕ್ಷಿತವಾಗಿ ಮಥುರೆಯನ್ನು ತಲುಪಿದನು. ಅಲ್ಲಿಂದ ಬೈರಾಗಿಯ ವೇಷವನ್ನು ಧರಿಸಿ ಸಂಚರಿಸುತ್ತ ಕೆಲವು ದಿವಸಗಳಲ್ಲಿ ಮಹಾರಾಷ್ಟ್ರಕ್ಕೆ ಬಂದನು. ಜನರಿಗೆ ಆನಂದವಾಯಿತು. "ಔರಂಗಜೇಬನಿಗೆ ಚನ್ನಾಗಿ ಫಜೀತಿಯಾಯಿತು" ಎಂದುಕೊಂಡರು.

ಮುಂದೆ ಕೆಲವು ವರುಷಗಳಲ್ಲಿ ಶಿವಾಜಿ ಸ್ವರಾಜ್ಯವನ್ನು ಸ್ಥಾಪಿಸಿದನು; "ಛತ್ರಪತಿ"ಎಂಬ ಬಿರುದನ್ನು ಧರಿಸಿದನು. ರಾಯಗಡದಲ್ಲಿ ಸ್ವಾತಂತ್ರ್ಯೋ ತ್ಸವವನ್ನು ನೆರವೇರಿಸಿದನು. ಛತ್ರಪತಿ ಶಿವಾಜಿಯಿಂದ ಸ್ಥಾಪಿತವಾದ ಈ ರಾಜ್ಯವು ಮುಂದೆ ಎರಡುನೂರೈವತ್ತು ವರುಷ ಬಾಳಿತು.

— ಅಭ್ಯಾಸ —

೧. ಬಾಲ್ಯದಲ್ಲಿ ಶಿವಾಜಿಗೆ ಯಾರಿಂದ ಶಿಕ್ಷಣವು ದೊರೆಯಿತು? ಅವರಿಂದ ಅವನಿಗೆ ಮನದಟ್ಟಾದ ಪಾಠವು ಯಾವದು?

೨. ಶಿವಾಜಿ ಸೆರೆಯಿಂದ ಪಾರಾದ ಸಂಗತಿಯನ್ನು ನಿಮ್ಮ ಮಾತಿನಲ್ಲಿ ಹೇಳಿರಿ.

# ೭. ಹೈದರ ಅಲಿ

ಹೈದರನು ಮೊದಲು ಸಾಮಾನ್ಯ ಸೈನಿಕನಾಗಿ ಮೈಸೂರು ಮಹಾರಾಜರ ಸೈನ್ಯದಲ್ಲಿ ಸೇರಿದವನು. ಆತನ ಪರಾಕ್ರಮವನ್ನು ಮೆಚ್ಚಿದ ರಾಜನು ಅವನನ್ನು ಮುಖ್ಯ ಪ್ರಧಾನನ ಪದವಿಗೇರಿಸಿದನು. ಕೊನೆಗೆ ಹೈದರನು ತಂತ್ರಗಳಿಂದ ರಾಜನನ್ನು ವಶಪಡಿಸಿಕೊಂಡು ತಾನೇ ಮೈಸೂರು ರಾಜ್ಯದ ಒಡೆಯನಾದನು.



೧೫. ಹೈದರ ಅಲಿ

ಹೈದರನ ಬುದ್ಧಿ ಅತ್ಯಂತ ಚುರುಕಾದದ್ದು, ಅವನ ನೆನಪಿನ ಶಕ್ತಿ ಅದ್ಭುತವಾದದ್ದು. ಒಂದೇ ಸಮಯದಲ್ಲಿ ಅನೇಕ ಕೆಲಸಗಳಲ್ಲಿ ಮನಸ್ಸು ಹಾಕಲು ಸಮರ್ಥನಾದ ಸಾವಧಾನಿ ಅವನು. ಆತನು ದಿನಾಲು ಮುಂಜಾನೆ ಕೈಕಾಲು ಮೋರೆತೊಳೆಯುತ್ತಿದ್ದಾಗ ಅನೇಕ ದೂತರು ಬದಿಯಲ್ಲಿ ನಿಂತಿರುತ್ತಿದ್ದರು; ಹಿಂದಿನ ದಿನ ತಾವು ಕಂಡು ತಿಳಿದ ಸಂಗತಿಗಳನ್ನು ಅವರು ತಿಳಿಸುತ್ತಿದ್ದರು. ಎಲ್ಲರೂ ಒಮ್ಮೆಲೆ ಮಾತನಾಡುತ್ತಿದ್ದರು. ಮತ್ತು ಅವರೆಲ್ಲರ ಕಡೆಗೂ ಹೈದರನ ಲಕ್ಷ್ಯವಿರುತ್ತಿತ್ತು. ತನಗೆ ಎಲ್ಲಿಯಾದರೂ ಸಂದೇಹ ಉಂಟಾದರೆ, ಇಲ್ಲವೆ ಹೆಚ್ಚಿಗೆ ತಿಳಿದುಕೊಳ್ಳಬೇಕು ಅನಿಸಿದರೆ, ಅವನು ನಡು ನಡುವೆ ಪ್ರಶ್ನೆ ಕೇಳಿ ತಿಳಿದುಕೊಳ್ಳುತ್ತಿದ್ದನು. ಯಾವ ಭಾಗದ ದೂತನು ಮಾತನಾಡುತ್ತಿದ್ದಾನೆ ಎಂಬುದು ಧ್ವನಿಯಿಂದಲೇ ಅವನಿಗೆ ಗೊತ್ತಾಗುತ್ತಿತ್ತು.

ಹೈದರನು ಸರಕಾರೀ ಕಚೇರಿಯ ಕೆಲಸವನ್ನು ನೋಡುವುದೂ ಹೀಗೆಯೇ. ಕಾರ್ಯದರ್ಶಿ ಬಂದ ಪತ್ರಗಳನ್ನು ಓದುವದನ್ನು ಕೇಳುತ್ತಲೇ, ಒಬ್ಬ ಕರಣಿಕನಿಗೆ ಏನು ಉತ್ತರ ಬರೆಯಬೇಕೆಂಬುದನ್ನು ಅವನು ಹೇಳುತ್ತಿದ್ದನು; ಮತ್ತೊಬ್ಬನನ್ನು ತನಗೆ ಬೇಕಾದ ಮಾಹಿತಿಗಾಗಿ ಪ್ರಶ್ನಿಸುತ್ತಿದ್ದನು. ಇಷ್ಟೇ ಅಲ್ಲ, ಮಹತ್ವದ ವಿಷಯದ ಬಗ್ಗೆ ಮಂತ್ರಿಯೊಡನೆ ಚರ್ಚೆಯೂ ಅದರೊಡನೆಯೇ ನಡೆಯುವದು.

ಬೇರೆ ಬೇರೆ ಧರ್ಮಗಳ ಜನರಲ್ಲಾಗುವ ಜಗಳಗಳನ್ನು ಶಕ್ಯವಿದ್ದ ಮಟ್ಟಿಗೆ ತಪ್ಪಿಸುವದೇ ಹೈದರನ ನೀತಿಯಾಗಿತ್ತು. ಅಂಥ ಜಗಳಕ್ಕೆ ಅವನು ಉತ್ತೇಜನವನ್ನು ಎಂದೂ ಕೊಡುತ್ತಿರಲಿಲ್ಲ. ಮುಸಲ್ಮಾನರೊಳಗಿನ ಶಿಯಾ

ಮತ್ತು ಸುನ್ನಿ ಎಂಬ ಎರಡು ಒಳಪಂಗಡಗಳಲ್ಲಿ ಒಮ್ಮೆ ಜಗಳ ಹುಟ್ಟಿತು. ಎರಡೂ ಗುಂಪುಗಳಲ್ಲಿ ಕಾಳಗವೇ ಆಗುವದೋ ಏನೋ ಎಂಬ ಮಟ್ಟಿಗೆ ಆ ಜಗಳವು ಬೆಳೆಯಿತು. ಅದು ಹೈದರನ ಕಿವಿಯವರೆಗೆ ಹೋಯಿತು. ಕೂಡಲೆ ಅವನು ಎರಡೂ ಗುಂಪುಗಳ ಹಿರಿಯರನ್ನು ಕರೆಯಿಸಿಕೊಂಡು, "ಇದೇನು ಮೂರ್ಖರ ಹಾಗೆ ಮಾಡುತ್ತಿದ್ದೀರಿ ? ನಾಯಿಗಳ ಹಾಗೆ ಒಬ್ಬರಿಗೊಬ್ಬರು ಏಕೆ ಬೊಗಳುತ್ತಿದ್ದೀರಿ ?" ಎಂದು ಕೇಳಿದನು. ಎರಡೂ ಬಣಗಳ ಹಿರಿಯರು ತಮತಮಗೆ ಹೇಳಬೇಕಾದುದನ್ನು ಹೇಳಿದರು. ಆಗ, "ಮಹಮ್ಮದ ಪೈಗಂಬರರ ಅನಂತರದ ಅಧಿಕಾರಿಗಳ ವಿಷಯದಲ್ಲಿ ಎರಡು ಬಣಗಳ ವಿಚಾರಗಳು ಬೇರೆಬೇರೆಯಾಗಿವೆ; ಅದರಿಂದ ಈ ಜಗಳವು ಬಂದಿದೆ" ಎಂದು ಹೈದರನಿಗೆ ತಿಳಿಯಿತು. "ನೀವು ಯಾರ ಸಲುವಾಗಿ ಜಗಳಾಡುತ್ತಿರುವಿರೋ ಅವರೀಗ ಬದುಕಿದ್ದಾರೋ?" ಎಂದು ಅವನು ಕೇಳಿದನು. "ಇಲ್ಲ" ಎಂದು ಆ ಹಿರಿಯರು ಉತ್ತರವಿತ್ತರು. "ಹಾಗಾದರೆ, ಸತ್ತುಹೋದ ಜನರ ಬಗ್ಗೆ ಈಗ ಜಗಳಾಡುವದು ಮೂರ್ಖತನವೇ ಸರಿ. ಹೋಗಿರಿ; ಇನ್ನು ಮುಂದೆ ಈ ಕೆಲಸಕ್ಕಾಗಿ ಸರಕಾರದ ವೇಳೆಯನ್ನು ವೆಚ್ಚ ಮಾಡಿಸಿದರೆ, ಜೋಕೆ ! ಗತಿ ನೆಟ್ಟಗಾಗಲಿಕ್ಕಿಲ್ಲ !" ಎಂದು ಹೇಳಿ ಕಳಿಸಿಬಿಟ್ಟನು.

ಅವನ ಸೈನ್ಯವು ಅವನ ದರ್ಪಕ್ಕೆ ವಿಧೇಯವಾಗಿತ್ತು. ಆಂಗ್ಲರನ್ನು ಹಿಂದುಸ್ತಾನದಿಂದ ಹೊರಗೆ ಹಾಕಲು ಅವನು ಬಹಳವಾಗಿ ಹೆಣಗಿದನು. ಆದರೆ ಅದು ಸಾಧಿಸಲಿಲ್ಲ. ಅವನು ೧೭೮೨ ರಲ್ಲಿ ಅರ್ಕಾಟ ಯುದ್ಧದಲ್ಲಿ ತೀರಿಕೊಂಡನು.

## — ಅಭ್ಯಾಸ —

೧. ಹೈದರನು ಮೈಸೂರಿನ ಒಡೆಯನಾದದ್ದು ಹೇಗೆ ?
೨. ಹೈದರನ ವಿಷಯದಲ್ಲಿ ಒಂದು ಕತೆಯನ್ನು ಹೇಳಿರಿ.



# ೮. ನಾಸೀರುದ್ದೀನ

**ಅರಸೊತ್ತಿಗೆಯೂ, ಧನವೂ ಪ್ರಜೆಗಳನ್ನು ಕಾಪಾಡಲಿಕ್ಕೆ ನನಗೆ ದೊರೆತಿವೆ. ಆದರೆ ನನ್ನ ಸುಖಕ್ಕಾಗಿ ಅವು ದೊರೆತಿಲ್ಲ.**

ನಾಸೀರುದ್ದೀನನು ತನ್ನ ಪತ್ನಿಗೆ ಹೇಳುತ್ತಿದ್ದ ಮಾತುಗಳಿವು.

ಇವನು ಒಬ್ಬ ಸಾಧು ಮನುಷ್ಯನು. ದಿಲ್ಲಿಯ ಅರಸನಾದ ಅಲ್ತಮಶಹನು ಇವನ ತಂದೆಯು. ರಝಿಯಾಳು ಇವನಿಗೆ ಅಕ್ಕನಾಗಬೇಕು. ತಂದೆಯ ತರುವಾಯ ಪಟ್ಟಕ್ಕೆ ಬಂದನು ಪ್ರಜೆಗಳೆಂದರೆ ಹೊಟ್ಟೆಯ ಮಕ್ಕಳಂತೆ ಎಂದು ತಿಳಿದು ಜೋಕೆ ಮಾಡಿದನು.



೧೬. ನಾಸೀರುದ್ದೀನ

ಈತನು ಘನವಿದ್ವಾಂಸನಿದ್ದನು. ಅರಸನಾದರೂ ಸ್ವತಃ ಪುಸ್ತಕಗಳನ್ನು ಬರೆದು ಅವುಗಳನ್ನು ಮಾರಿ ಬಂದ ಹಣದಿಂದ ಉಪಜೀವಿಸುತ್ತಿದ್ದನು. ತನ್ನ ಹೆಂಡತಿಯ ಹೊರತು ಬೇರೆ ಯಾರ ಕೈಯಿಂದಲೂ ಊಟ ಮಾಡುತ್ತಿದ್ದಿಲ್ಲ. ಇವನ ಉಡಿಗೆ ತೊಡಿಗೆಗಳೂ ಹಾಸಿಗೆ ಹೊದಿಕೆಗಳೂ ಬಹು ಸಾದಾ ತರದವಿದ್ದವು. ಒಂದು ದಿನ ನಾಸೀರುದ್ದೀನನ ಹೆಂಡತಿಯಾದ ಬೇಗಮಳು ಅಡಿಗೆ ಮಾಡುವಾಗ ಕೈ ಸುಟ್ಟಕೊಂಡಳಂತೆ ಆಗ್ಗೆ ಬೇಗಮ್‌ಳು ಮತ್ತು ಬಾದಶಹನಾದ ನಾಸೀರುದ್ದೀನನ ನಡುವೆ ನಡೆದ ಮಾತುಗಳಿವು.

**“ದಿಲ್ಲಿಯ ದೊರೆಯ ಅಡಿಗೆಯ ಮನೆಯಲ್ಲಿ ಆಳುಗಳೇ ಇಲ್ಲವಲ್ಲ!”**

**“ಆಳಿಗೆ ಸಂಬಳ ಕೊಡಲು ಬಾದಶಹನಲ್ಲಿ ಹಣವಿಲ್ಲವಲ್ಲ!”**

**“ಬೊಕ್ಕಸದಲ್ಲಿ ಹಣವಿಲ್ಲವೇ?”**

**“ಇದೇ, ಬೇಕಾದಷ್ಟಿದೆ. ಆದರೆ ಅದು ಬಾದಶಹನದಲ್ಲ; ಪ್ರಜೆಗಳದು. ಅವರಿಗಾಗಿಯೇ ಅದನ್ನು ವೆಚ್ಚಮಾಡಬೇಕು?”**

ಪ್ರಜರ ಸುಖವೇ ತನ್ನ ಸುಖವೆಂಬ ಭಾವನೆಯಿಂದ ರಾಜ್ಯವಾಳಿ ಕೀರ್ತಿವಂತನಾದನು.

### — ಅಭ್ಯಾಸ —

೧. ನಾಸೀರುದ್ದೀನನು ಪ್ರಜೆಗಳನ್ನು ಯಾವ ರೀತಿಯಿಂದ ನೋಡುತ್ತಿದ್ದನು?

೨. ಅರಸೊತ್ತಿಗೆಯ ಸಲುವಾಗಿ ಇವನ ಭಾವನೆಯು ಹೇಗೆ ಇತ್ತು?

೩. ಇವನಿಂದ ಕಲಿಯಬೇಕಾದ ಗುಣಗಳಾವವು?

# ೯. ಹರಿಹರ ಮತ್ತು ಬುಕ್ಕ

ಈಗ ಜನರು "ಹಾಳು ಹಂಪಿ" ಎಂದು ಕರೆಯುವ ಸ್ಥಳದಲ್ಲಿ ಮೊದಲು ಒಂದು ದೊಡ್ಡ ಪಟ್ಟಣವಿತ್ತು. ಅದಕ್ಕೆ **ವಿಜಯನಗರ** ಎಂದು ಹೆಸರಿತ್ತು. ಅದು ನಮ್ಮ ಕನ್ನಡ ನಾಡಿನ ವೈಭವಶಾಲಿಯಾದ ಸಾಮ್ರಾಜ್ಯದ ರಾಜಧಾನಿಯಾಗಿತ್ತು. **ಶ್ರೀ** ವಿದ್ಯಾರಣ್ಯರು ಮತ್ತು ಹುಕ್ಕ, ಬುಕ್ಕ ಎಂಬ ಇಬ್ಬರು ಅಣ್ಣ-ತಮ್ಮಂದಿರು ಅದನ್ನು ಕಟ್ಟಿದವರು.



೧೭. ಶ್ರೀ ವಿದ್ಯಾರಣ್ಯರು

ವಿಜಯನಗರವು ಹುಟ್ಟುವ ಮೊದಲು ಅಲ್ಲಿ ಒಂದು ದೊಡ್ಡ ಕಾಡಿತ್ತು. ಅದರ ಮೂರು ಬದಿಗಳಲ್ಲಿ ಗುಡ್ಡಗಳು, ಒಂದು ಬದಿಯಲ್ಲಿ ತುಂಗಭದ್ರಾ ನದಿ. ಆ ಅಡವಿಯಲ್ಲಿ ವರಂಗಲ್ಲಿನ ಇಬ್ಬರು ರಾಜಪುತ್ರರು ಇರುತ್ತಿದ್ದರು. ಅವರ ನಾಡನ್ನು ಮುಸಲ್ಮಾನರು ಗೆದ್ದುಕೊಂಡಿದ್ದರಿಂದ ಅವರು ಇಲ್ಲಿ ಆಸರ ಹೊಂದಿದ್ದರು. ಆ ರಾಜಪುತ್ರರೇ ಹುಕ್ಕ-ಬುಕ್ಕ ಎಂಬವರು. ಹುಕ್ಕನ ಇನ್ನೊಂದು ಹೆಸರು **ಹರಿಹರ.**

ಆ ಸಮಯದಲ್ಲಿ ಅವರಿಗೆ ಶ್ರೀ ವಿದ್ಯಾರಣ್ಯ ಸ್ವಾಮಿಗಳ ದರುಶನ ಆಯಿತು. ವಿದ್ಯಾರಣ್ಯರು ಶೃಂಗೇರಿಯ ಶ್ರೀ ಶಂಕರಾಚಾರ್ಯಪೀಠದ ಗುರುಗಳು. **ಹಿಂದು ಧರ್ಮದ ರಕ್ಷಣೆಗಾಗಿಯೂ ಬೆಳವಣಿಗೆಗಾಗಿಯೂ ಟೊಂಕ ಕಟ್ಟಿದವರು.** ಈ ರಾಜಪುತ್ರರು ವೀರರೆಂಬುದನ್ನು ಅರಿತು-ಕೊಂಡು, ಒಂದು ರಾಜ್ಯವನ್ನು ಸ್ಥಾಪಿಸುವಂತೆ ಅವರನ್ನು ಹುರಿದುಂಬಿ

ಸಿದರು. ಆ ಕಾರ್ಯದಲ್ಲಿ ಅವರು ಹುಕ್ಕ-ಬುಕ್ಕರಿಗೆ ಸಲಹೆಗಾರರಾಗಿದ್ದಲ್ಲದೆ, ಹೇರಳವಾಗಿ ಧನವನ್ನೂ ಒದಗಿಸಿಕೊಟ್ಟರು. ಮತ್ತು ರಾಜ್ಯ ಸ್ಥಾಪನೆಯಾದ ಬಳಿಕ ಅವರ ಮಂತ್ರಿಗಳಾಗಿಯೂ ಇದ್ದರು.

ಹುಕ್ಕ-ಬುಕ್ಕರು ತಾವಿದ್ದ ಆ ಅಡವಿಯಲ್ಲಿಯೇ ತಮ್ಮ ಹೊಸ ರಾಜಧಾನಿಯನ್ನು ಕಟ್ಟಿದರು. ಈ ವಿಷಯದಲ್ಲಿ ಒಂದು ದಂತಕಥೆಯುಂಟು. ಹರಿಹರನು ಒಮ್ಮೆ ಬೇಟೆಯಾಡುತ್ತಿದ್ದನು. ಆಗ ಒಂದು ಮೊಲವು ಒಂದು ನಾಯಿಯನ್ನು ಬೆನ್ನಟ್ಟಿತು. ಈ ವಿಚಿತ್ರವನ್ನು ಕಂಡು ಹರಿಹರನಿಗೆ ಆಶ್ಚರ್ಯವಾಯಿತು. ನಿಜವಾಗಿ ನೋಡಿದರೆ ನಾಯಿಗೆ ಮೊಲವು ಅಂಜಿ ಓಡಬೇಕು; ಇದೇನು ತಿರುವುಮುರುವು ! ಈ ಸಂಗತಿಯನ್ನು ಅವನು ಗುರುಗಳಾದ ವಿದ್ಯಾರಣ್ಯರಿಗೆ ತಿಳಿಸಿದನು. "ಇದು ಒಳ್ಳೆಯ ಸಂಕೇತ" ಎಂದು ಅವರು ಹೇಳಿ, ಆ ಸ್ಥಳದಲ್ಲಿಯೇ ತಮ್ಮ ಹೊಸ ರಾಜ್ಯದ ರಾಜಧಾನಿಯನ್ನು ನಿರ್ಮಿಸಬೇಕೆಂದು ಗೊತ್ತು ಮಾಡಿದರು.

ಹೊಸದಾಗಿ ಸ್ವರಾಜ್ಯವನ್ನು ಸ್ಥಾಪಿಸಿದ ಹರಿಹರನು ಸತತವಾಗಿ ಶತ್ರುಗಳನ್ನು ಇದರಿಸಬೇಕಾಯಿತು. ಕಲಬುರ್ಗಿಯ ಮತ್ತು ಬೀದರದ ಮುಸಲ್ಮಾನ ರಾಜರೊಡನೆ ಅವನು ಹಲವು ಯುದ್ಧಗಳನ್ನು ಮಾಡಿದನು. ಆ ಅರಸರ ದಾಳಿಗಳಿಂದ ಹಿಂದೂ ಜನರ ಧರ್ಮವನ್ನೂ ಸಂಸ್ಕೃತಿಯನ್ನೂ ಕಾಪಾಡಿದನು. ಹುಕ್ಕ-ಬುಕ್ಕರ ಈ ಸಾಮ್ರಾಜ್ಯವು ಮುಂದೆ ಬೆಳೆದು ಒಂದು ಕಾಲದಲ್ಲಿ ತುಂಗಭದ್ರೆಯಿಂದ ಕನ್ಯಾಕುಮಾರಿಯ ವರೆಗೂ ಹಬ್ಬಿದ್ದಿತು. ಈ ವಿಜಯನಗರದ ಸಾಮ್ರಾಜ್ಯದ ವೈಭವವನ್ನು ಪರದೇಶಿಯ ಪ್ರವಾಸಿಕರು ಕಂಡು ಬೆರಗಾಗಿ ಬಣ್ಣಿಸಿದ್ದಾರೆ.

## — ಅಭ್ಯಾಸ —

೧. ವಿಜಯನಗರ ರಾಜ್ಯವನ್ನು ಸ್ಥಾಪಿಸಿದವರು ಯಾರು ? ಅದರಿಂದ ಅವರು ಸಾಧಿಸಿದ ಮುಖ್ಯ ಉದ್ದೇಶವು ಯಾವದು ?

೨. ವಿದ್ಯಾರಣ್ಯರು ಯಾರು ?



# ೧೦. ರಾಣಾ ಪ್ರತಾಪ ಮತ್ತು ಭಾಮುಶಾಹ

## "ನಾನೀಗ ರಾಣಾ ಅಲ್ಲ, ಸ್ವಾತಂತ್ರ್ಯಕ್ಕಾಗಿ ಅಲೆದಾಡುವ ತಿರಕ"

ಭಾಮುಶಹಾನೆದುರಿಗೆ ಇರಿಸಿದ ಉದ್ಗಾರಗಳಿವು.

**ರಾಣಾ ಪ್ರತಾಪ!** ಅತ್ಯಂತ ಸ್ವಾಭಿಮಾನಿಯಾದ ಪ್ರತಾಪ! **"ಪ್ರಾಣ ಹೋಗಲಿ– ಪರಕೀಯರ ದಾಸ್ಯವನ್ನು ಸ್ವೀಕರಿಸಲಾರೆ"** ಎನ್ನುವದು ಈತನಪಣ. ವನವಾಸವೊದಗಿತು, ಉಪವಾಸದ ಪ್ರಸಂಗಗಳು ಬಂದವು. ಪಲವು ಕಷ್ಟಗಳು ಎದುರಾದವು, ಆದರೂ ಈತನ ಪಣವು ಅಚ್ಚಳಿಯಲಿಲ್ಲ. ರಜಪೂತ ಜನಾಂಗದ ಶೂರತನವು ಪಾರತಂತ್ರ್ಯದ ಕಲಂಕ ಹತ್ತದೆ ಇವನಲ್ಲಿ ಉಜ್ವಲವಾಗಿ ಶೋಭಿಸಿತು. ಇದೇ ಈ ಪ್ರತಾಪನ ಚರಿತ್ರೆಯ ಹಿರಿಮೆ.

ಅಕಬರ ಬಾದಶಹನು ಎಷ್ಟೋ ರಜಪೂತರಾಜರನ್ನು ಜಯಿಸಿದನು. ಅವರಲ್ಲಿ ಅನೇಕರಿಗೆ ದೊಡ್ಡ ದೊಡ್ಡ ನೌಕರಿಗಳನ್ನು ಕೊಟ್ಟನು. ಜಯಪುರದ ರಾಜನಾದ ಮಾನಸಿಂಹನ ತಂಗಿಯನ್ನು ಅಕಬರನು ಮದುವೆಯಾದನು. ಮೊಗಲ ರಾಜಪುತ್ರರಿಗೂ ರಜಪೂತ ರಾಜಕನ್ಯೆಯರಿಗೂ ವಿವಾಹವಾಗುವದಕ್ಕೆ ಆತನು ಉತ್ತೇಜನ ಕೊಟ್ಟನು. ಈ ಬಗೆಯ ಶರಣಾಗತಿಯನ್ನು ಒಪ್ಪದವನೆಂದರೆ **ಚಿತ್ತೋಡದ ರಾಣಾ.** ಆತನ ಹೆಸರು ಪ್ರತಾಪ. ರಾಜ್ಯವು ಹೋದರೂ ಚಿಂತೆಯಿಲ್ಲ, ಮೊಗಲರ ದಾಸ್ಯವನ್ನು ಎಂದಿಗೂ ಸ್ವೀಕರಿಸಲಿಕ್ಕಿಲ್ಲ ಎಂದು ಆತನ ದೃಢಸಂಕಲ್ಪ. ಮೊಗಲ ಸೇನೆಯೊಡನೆ ಅವನ ಯುದ್ಧಗಳು ಸತತವಾಗಿ ನಡೆಯುತ್ತಿದ್ದವು. ಹಳದಿ ಘಟ್ಟದಲ್ಲಿ ಒಂದು ದೊಡ್ಡ ಕಾಳಗ ನಡೆಯಿತು. ಮೊಗಲ ಸೇನೆ ಸಂಖ್ಯೆಯಿಂದ ಬಹಳ ದೊಡ್ಡದಿತ್ತು; ಪ್ರತಾಪನ ರಜಪೂತ ಸೇನೆ, ಸಂಖ್ಯೆಯಿಂದ ಸಣ್ಣದು. ಆದರೆ ಪ್ರತಾಪದಿಂದ ಹಿರಿದಾಗಿತ್ತು. ರಾಣಾ ಶೌರ್ಯದಿಂದ ಕಾದಿದನಾದರೂ ಮೊಗಲರ ಸಂಖ್ಯಾಬಲಕ್ಕೆ ಸೋಲಬೇಕಾಯಿತು.

ಆ ಮೇಲೆ ಪ್ರತಾಪನು ತನ್ನ ಕೆಲವು ನಂಬಿಗೆಯ ಸೇವಕರೊಂದಿಗೆ **ಅರವಲಿ** ಬೆಟ್ಟದ ಕಾಡಿನಲ್ಲಿ ಇರತೊಡಗಿದನು. ಮತ್ತು ಅಡಗಿ ಹೊಂಚು ಹಾಕಿ ಮೊಗಲರ ಮೇಲೆ ಎರಗುತ್ತ ಕಾದಬೇಕೆಂದು ಅವನು ನಿಶ್ಚಯಿಸಿದನು.

ಇದರಿಂದ ಇರುವದಕ್ಕೆ ಮನೆಯಿಲ್ಲದೆ, ಎಷ್ಟೋಸಲ ಊಟವಿಲ್ಲದೆ ಕಷ್ಟಬಡುತ್ತ ತಿರುಗಬೇಕಾಯಿತು. ಈವೊತ್ತು ಒಂದು ಕಡೆಯಿದ್ದರೆ ನಾಳೆ ಇನ್ನೊಂದು ಕಡೆ, ಮರುದಿನ ಮತ್ತೊಂದು ಕಡೆ ಅವನು ಕಾಲಕಳೆಯುತ್ತಿದ್ದ.

ಅವನ ಈ ಸ್ಥಿತಿಯಲ್ಲಿಯೂ ಅವನಿಗೆ ನೆರವಾಗುವ ಅಭಿಮಾನಿ ರಜಪೂತರು ಕೆಲವರಿದ್ದರು. **ಭಾಮಶಾಹ** ಎಂಬವನು ಅವರೊಳಗೊಬ್ಬನು. ರಾಣಾ ಪ್ರತಾಪನ ಹಿಂದಿನ ಒಬ್ಬ ಮಂತ್ರಿ ಅವನು. ಅವನು ಒಮ್ಮೆ ಮಾಳವ ಪ್ರಾಂತದಲ್ಲಿ ದಾಳಿ ಮಾಡಿ ಲಕ್ಷಾವಧಿ ರೂಪಾಯಿಗಳನ್ನು ದೊರಕಿಸಿದನು. ಆ ಹಣವನ್ನು ಕಟ್ಟಿಕೊಂಡು ಪ್ರತಾಪನಿದ್ದ ಅಡವಿಗೆ ಅವನು ಧಾವಿಸಿ ಬಂದನು.



೧೮. ರಾಣಾ ಪ್ರತಾಪ

ವೃದ್ಧ ಮಿತ್ರನನ್ನು ಬಹುದಿನಗಳ ಮೇಲೆ ಕಂಡು ಪ್ರತಾಪನಿಗೆ ಆನಂದವಾಯಿತು. "ಬರ್ರಿ ಬರ್ರಿ, ಎಲ್ಲವೂ ಕುಶಲವೇ ? ಇಲ್ಲಿಗೇಕೆ ಬಂದಿರೀಗ ?" ಎಂದು ವಿಚಾರಿಸಿದನು.

"ರಾಣಾರವರನ್ನು ನೋಡದೆ ಬಹಳ ಕಾಲವಾಗಿತ್ತು; ನೋಡಲು ಬಂದೆ." ಎಂದನು ಭಾಮಶಾಹ.

**"ನಾನೀಗ ರಾಣಾ ಅಲ್ಲ. ಸ್ವಾತಂತ್ರ್ಯಕ್ಕಾಗಿ ಅಲೆದಾಡುವ ತಿರುಕ ನಾನು !"** ಎಂದು ಪ್ರತಾಪನು ನಗೆಯಾಡಿದನು.

ಅದಕ್ಕೆ ಭಾಮಶಾಹನು, "ಹೀಗೇಕೆ ಹೇಳುತ್ತೀರಿ ಮಹಾರಾಣಾ ನಾವು ನಿಮ್ಮ ಅನ್ನವನ್ನೇ ಉಣ್ಣುತ್ತಿದ್ದೇವೆ, ನನ್ನ ಬಳಿಯಲ್ಲಿ ಬೇಕಾದಷ್ಟು ಧನವಿದೆ. ಅದನ್ನು ತಮಗೆ ಕೊಡಬೇಕೆಂದು ಬಂದೆನು," ಎಂದು ಹೇಳಿದನು.

ರಾಣಾನಿಗೆ ಆಶ್ಚರ್ಯವಾಯಿತು ಅವನು ಹೇಳಿದನು, "ಪ್ರಧಾನರೇ, ಇದೇನು ? ಹೀಗೆ ಮಾಡುವದರಿಂದ ನನ್ನಂತೆಯೇ ನಿಮ್ಮ ಸ್ಥಿತಿಯೂ ಕಠಿಣವಾದಿತು !"

"ಇಲ್ಲ, ಮಹಾರಾಣಾಜೀ, ತಾವು ಈ ದ್ರವ್ಯದಿಂದ ಸೈನ್ಯವನ್ನು ಕಟ್ಟಿ ಮಾತೃಭೂಮಿಯನ್ನು ಸ್ವತಂತ್ರಗೊಳಿಸುವಿರಿ—ಎಂದು ನನಗೆ ನಂಬುಗೆಯಿದೆ." ಎಂದು ಭಾಮಶಾಹನು ಬಿನ್ನವಿಸಿದನು.

ಈ ಮಾತಿನಿಂದ ಪ್ರತಾಪನಿಗೆ ಹಿಗ್ಗಾಯಿತು, ಉತ್ಸಾಹ ಬಂದಿತು. ಈ ಸಮಯದಲ್ಲಿ ಅಕಬರನ ದಂಡು ಸೀಮಾಪ್ರಾಂತದಲ್ಲಿ ತೊಡಗಿತ್ತು. ಇದೇ ಒಳ್ಳೇಯ ಹೊತ್ತೆಂದು ಪ್ರತಾಪನು ದಂಡನ್ನು ಕಳಿಸಿದನು; ಮದ್ದು ಗುಂಡುಗಳನ್ನು ಸಂಗ್ರಹಿಸಿದನು. ಮೆಲ್ಲಮೆಲ್ಲನೆ ತನ್ನ ಪ್ರಾಂತವನ್ನು ಗೆದ್ದು ಕೊಂಡನು. ಚಿತ್ತೋಡವನ್ನು ಮಾತ್ರ ಮರಳಿ ಪಡೆಯುವದಾಗಲಿಲ್ಲ.

ಈಗ ರಾಣಾ ಪ್ರತಾಪನು ಮುದುಕನಾಗಿದ್ದಾನೆ. ಅವನು ಸ್ವರ್ಗವಾಸಿ ಯಾಗುವ ಪೂರ್ವದಲ್ಲಿ ತನ್ನ ಸರದಾರರಿಂದ ಹೀಗೆ ಶಪಥ ತೆಗೆದುಕೊಂಡನು.

**"ನಾವು ಎಂದೆಂದಿಗೂ ಮೊಗಲರ ಯಜಮಾನಿಕೆಯನ್ನು ಒಪ್ಪಿಸಿ ಕೊಳ್ಳುವದಿಲ್ಲ !"**

## — ಅಭ್ಯಾಸ —

೧. ಭಾಮಶಾಹನು ಪ್ರತಾಪನಿಗೆ ಧನನನ್ನು ಏತಕ್ಕೆ ಕೊಟ್ಟನು ?

೨. ಪ್ರತಾಪನು ಸಾಯುವವರಗೆ ಪಾಲಿಸಿದ ಪಣವು ಯಾವದು ?



# ಭಾಗ ೩. ರಾಜಕೀಯ ಗುರುಗಳು.

## ೧. ಕೌಟಿಲ್ಯ

### ಆರ್ಯ ಚಾಣಕ್ಯ

ಹಿಂದಕ್ಕೆ **ವಿಷ್ಣುಗುಪ್ತ**ನೆಂಬ ಬ್ರಾಹ್ಮಣನಿದ್ದನು. ಅವನಿಗೆ **ಚಾಣಕ್ಯ**ನೆಂದೂ ಅನ್ನುತ್ತಿದ್ದರು. ಕೌಟಿಲ್ಯನೆಂದೂ ಪ್ರಸಿದ್ಧನಾಗಿರುವನು. ಈ ಬ್ರಾಹ್ಮಣನು ಒಂದು ದಿವಸ ನದಿಯಲ್ಲಿ ಸ್ನಾನ ಮಾಡಿಕೊಂಡು, ಮಂತ್ರಗಳನ್ನು ಹೇಳುತ್ತ ಮನೆಗೆ ಹೊರಟಿದ್ದನು. ಎಷ್ಟು ಶಾಂತ, ಎಷ್ಟು ಗಂಭೀರ ಆಗ ಆ ಮೂರ್ತಿ! ಹೋಗುಹೋಗುತ್ತ ಅವನು ದಾರಿಯಲ್ಲಿ ಏನನ್ನೋ ಎಡವಿದನು. ಅವನು ಮುಗ್ಗರಿಸಿ ನೆಲಕ್ಕೆ ಕುಳಿತನು. ನೋಡುತ್ತಾನೆ; ಕಾಲ ಬೆರಳು ಒಡೆದು ನೆತ್ತರು ಬಂದಿದೆ! ಅದೇನದು ತಾನು ಎಡವಿದ್ದು? ಸಣ್ಣ ಹುಲ್ಲುಗಡ್ಡೆ, ಬ್ರಾಹ್ಮಣನಿಗೆ ಸಿಟ್ಟು ಬಂದಿತು. ಆ ಹುಲ್ಲನ್ನು ಬೇರು ಸಹಿತವಾಗಿ ಕಿತ್ತಿದನು; ಅದನ್ನು ಸಣ್ಣಾಗಿ ಹರಿಹರಿದು ಚೂರುಮಾಡಿ ಒಲೆಯೊಳಗೆ ಒಗೆದನು. ಆ ಹುಲ್ಲು ಸುಟ್ಟು ಬೂದಿಯಾದಾಗಲೇ ಅವನ ಮನಸ್ಸಿಗೆ ಸಮಾಧಾನ. ತನಗೆ ಅಡ್ಡ ಬರುವವರ ಬಗ್ಗೆ, ಕೇಡು ಬಗೆಯುವವರ ಬಗ್ಗೆಯೂ ಇಷ್ಟೇ ಹಟ ಈ ಬ್ರಾಹ್ಮಣ.

ಆ ಕಾಲದಲ್ಲಿ **ಮಗಧದೇಶದಲ್ಲಿ ನಂದ** ಮನೆತನದ ರಾಜರು ಆಳುತ್ತಿದ್ದರು. ಕೌಟಿಲ್ಯನು ಅವರ ಆಶ್ರಯದಲ್ಲಿ ಇರತೊಡಗಿದನು. ಕೌಟಿಲ್ಯನು ಒಳ್ಳೆಯ ಬರೆಹಗಾರನೂ ಕವಿಯೂ ಆಗಿದ್ದನು. ಒಂದು ದಿನ ನಂದ ರಾಜನು ಅವನಿಗೆ ಅಪಮಾನ ಮಾಡಿದನು. ಅದರಿಂದ ರೇಗಿದ ಕೌಟಿಲ್ಯನು **“ನಂದ ವಂಶವನ್ನು ನಿರ್ಮೂಲ ಮಾಡುವವರೆಗೂ ನನ್ನ ಈ ಚಂಡಿಕೆಗೆ ಗಂಟಿಕ್ಕುವದಿಲ್ಲವೆಂದು”** ಎಂದು ಪ್ರತಿಜ್ಞೆಮಾಡಿ ಅಲ್ಲಿಂದ ಹೊರಬಿದ್ದನು; ಮತ್ತು ಮಗಧದೇಶವನ್ನು ಬಿಟ್ಟು ಅಡವಿ ಅಡವಿ ತಿರುಗತೊಡಗಿದನು;

ಅದೇ ಪ್ರಾಂತದಲ್ಲಿ **ಮೌರ್ಯವಂಶ**ವೆಂಬ ಅರಸುಮನೆತನದ **ಚಂದ್ರಗುಪ್ತ**ನೆಂಬ ರಾಜಕುಮಾರನು ಹೀಗೆಯೇ ಅಡವಿ ಪಾಲಾಗಿದ್ದನು. ಕಾಡಿನಲ್ಲಿ ಸಂಚರಿಸುತ್ತಿದ್ದ ಕೌಟಿಲ್ಯನಿಗೆ ಒಂದು ದಿನ ಚಂದ್ರಗುಪ್ತನು ಕೂಡಿದನು. ಅವರಿಬ್ಬರಲ್ಲಿಯೂ ಗೆಳೆತನವುಂಟಾಯಿತು. ಹೀಗಿರುತ್ತ ಮಗಧರಾಜ್ಯವನ್ನು ವಶಪಡಿಸಿಕೊಳ್ಳಬೇಕೆಂದು ಗೊತ್ತು ಮಾಡಿ ಸಂಚು ಹೂಡಿದರು. ಆ ರಾಜ್ಯದ ನಾಲ್ಕೂ ದಿಕ್ಕುಗಳ ಗಡಿಗಳನ್ನೂ ಜನರ ಸಹಾಯವನ್ನೂ ಅವರು ದೊರಕಿಸಿದರು. ಛಲದವನಾದ ಕೌಟಿಲ್ಯನ ಹಿರಿದಾದ ಬುದ್ಧಿ, ಮೌರ್ಯ ಚಂದ್ರಗುಪ್ತನ ಶೌರ್ಯ, ಮೇಲಾಗಿ ಜನತೆಯ ನೆರವು,—ಮೂರೂ ಕೂಡಿದ ಬಳಿಕ ಕೇಳುವದೇನು ? ಅವರ ಜೋಳಿಗೆ ತುಪ್ಪದಲ್ಲಿ ಬೀಳದೆ ಇದ್ದೀತೆ ? ಕೆಲ ಕಾಲದಲ್ಲಿಯೇ ನಂದ ವಂಶವನ್ನು ಸಮೂಲನಾಗಿ ಉರುಳಿಸಿಬಿಟ್ಟರು. ಮಗಧರಾಜ್ಯವು ಚಂದ್ರಗುಪ್ತನಿಗಾಯಿತು. ಮುಂದೆ ಅವನು ಸುತ್ತುಮುತ್ತಿನ ರಾಜ್ಯವನ್ನೆಲ್ಲ ಗೆದ್ದು ಸಾಮ್ರಾಟನಾದನು.

ಚಂದ್ರಗುಪ್ತನಿಗೆ ಕೌಟಿಲ್ಯನೇ ಪ್ರಧಾನನು. ಅವನು ಅರ್ಥಶಾಸ್ತ್ರವನ್ನೂ ರಾಜನೀತಿಯನ್ನು ಕುರಿತು ಗ್ರಂಥವನ್ನು ಬರೆದನು. **"ಕೌಟಿಲೀಯ ಅರ್ಥಶಾಸ್ತ್ರ"** ವೆಂದು ಆ ಗ್ರಂಥದ ಹೆಸರು. ರಾಜ್ಯವನ್ನು ಆಳುವದು ಹೇಗೆ ? ಪ್ರಜೆಗಳೊಂದಿಗೆ ಯಾವ ರೀತಿ ನಡೆದುಕೊಳ್ಳಬೇಕು? ದೇಶದೊಳಗೆ ಶಾಂತತೆಯನ್ನೂ ಸುಖಸಮಾಧಾನಗಳನ್ನೂ ಕಾಯ್ದುಕೊಳ್ಳುವ ಉಪಾಯಗಳು ಯಾವವು ? ಮೊದಲಾದ ವಿಷಯಗಳನ್ನು ಅದರಲ್ಲಿ ಹೇಳಿದೆ. ಹಲವು ಜನ ರಾಜರು ಕೌಟಿಲ್ಯನ ನಿಯಮದಂತೆ ರಾಜ್ಯಕಾರಭಾರವನ್ನು ನಡೆಸಿದರು. "ಒಮ್ಮತ-ಒಕ್ಕಟ್ಟು" ಇದೇ ಕೌಟಿಲ್ಯನು ಜನತೆಗೆ ಕೊಟ್ಟ ಸಂದೇಶ. ಅವನಿಗೂ ಅವನ ದೃಢ ಸಂಕಲ್ಪಕ್ಕೂ ಧನ್ಯವಾದ !

## — ಅಭ್ಯಾಸ —

೧. ಚಂದ್ರಗುಪ್ತನಿಗೆ ರಾಜ್ಯವನ್ನು ಗೆಲ್ಲುವದಕ್ಕೆ ಯಾರ ನೆರವು ಸಿಕ್ಕಿತು ?
೨. ಕೌಟಿಲ್ಯನು ಬರೆದ ಗ್ರಂಥವು ಯಾವದು ?



# ೨. ಹಿಮೂ

ದಿಲ್ಲಿಯ ಬಾದಶಹನಾದ ಆದಿಲಶಹಾ ಸೂರನ ಪ್ರಧಾನನಾದ ಹಿಮೂ, ದಿಲ್ಲಿಯ ಒಬ್ಬ ಹಿಂದೂ ವ್ಯಾಪಾರಿಯ ಮಗನು. ಅವನು ಒಳ್ಳೇ ಚತುರನು ಹಾಗೂ ಕರ್ತೃತ್ವ ಶಕ್ತಿಯುಳ್ಳವನು. ಅವನ ಈ ಯೋಗ್ಯತೆಯನ್ನು ಅರಿತು ಬಾದಶಹನು ತನ್ನ ದರಬಾರದಲ್ಲಿ ಅವನಿಗೆ ಅಧಿಕಾರ ಸ್ಥಾನವನ್ನು ಕೊಟ್ಟನು. ಈ ಅಧಿಕಾರದಲ್ಲಿದ್ದಾಗ ಹಿಮೂ ತನ್ನ ಚಾತುರ್ಯ ಮತ್ತು ಕರ್ತೃತ್ವ ಶಕ್ತಿಗಳಿಂದ ಬೇಗನೆ ಮುಖ್ಯಮಂತ್ರಿಯ ಪದಕ್ಕೆ ಏರಿದನು.

ಹಿಮೂ ಹಿಂದೂ ಅವನು ಮುಖ್ಯ ಪ್ರಧಾನನಾದದ್ದು ಎಷ್ಟೋ ಮುಸಲ್ಮಾನ ಸರದಾರರಿಗೆ ಸೇರಲಿಲ್ಲ. ಅವನ ವಿಷಯದಲ್ಲಿ ಅವರಿಗೆ ಹೊಟ್ಟೇಕಿಚ್ಚು ಉಂಟಾಯಿತು. ಆದರೆ ಬಾದಶಹನಿಗೆ ಹಿಮೂನ ಗುಣಗಳ ಬಗ್ಗೆ ಮೆಚ್ಚಿಕೆಯಿತ್ತು; ಅವನ ಯೋಗ್ಯತೆಯ ಬಗ್ಗೆ ನಂಬಿಕೆಯಿತ್ತು. ಆದುದರಿಂದ ಆ ಸರದಾರರ ಆಟವೇನೂ ನಡೆಯಲಿಲ್ಲ; ಹಿಮೂನನ್ನು ಆ ಪದದಿಂದ ಕದಲಿಸುವದು ಅವರಿಂದಾಗಲಿಲ್ಲ. ಕೊನೆಗೆ ಅವರು ಸೂರ ಬಾದಶಹನನ್ನೂ, ಹಿಮೂನನ್ನೂ ಕೊಲೆ ಮಾಡಿ, ದಿಲ್ಲಿಯ ಸಿಂಹಾಸನದಲ್ಲಿ ಮೊಗಲ ಮನೆತನದ ಹುಮಾಯೂನನನ್ನು ಕುಳ್ಳಿರಿಸಬೇಕೆಂದು ಸಂಚು ಹೂಡಿದರು. ಆದರೆ ಈ ಸಂಚಿನ ಸುಳುವು ಹಿಮೂನಿಗೆ ಹತ್ತಿತು. ಕೂಡಲೆ ಅವನು ಸೂರಶಹನೊಂದಿಗೆ ಗುಟ್ಟಾಗಿ ದಿಲ್ಲಿಯಿಂದ ಓಡಿಹೋದನು. ಆಗ ಸರದಾರರಿಗೆ ಸಮಾಧಾನವಾಯಿತು. ಅವರು ಹುಮಾಯೂನನನ್ನು ಕರೆತಂದು ದಿಲ್ಲಿ ರಾಜ್ಯಕ್ಕೆ ಪಟ್ಟಗಟ್ಟಿದರು.

ಓಡಿ ಹೋದ ಹಿಮೂ ಸುಮ್ಮನೆ ಬಿಡಲಿಲ್ಲ. ಬಂಗಾಲದಲ್ಲಿ ದಂಡನ್ನು ಕೂಡಿಸಿದನು. ದಿಲ್ಲಿಯ ಮೇಲೆ ಸಾಗಿಹೋಗಬೇಕೆಂದು ನಿರ್ಧರಿಸಿದನು. ದೈವವೂ ಅವನಿಗಾಗ ಅನುಕೂಲವಾಯಿತು. ಅದೇ ಹೊತ್ತಿಗೆ ಹುಮಾಯೂನನು ಉಪ್ಪರಿಗೆಯ ಮೇಲಿಂದ ಬಿದ್ದು ಮರಣ ಹೊಂದಿದನು. ಅವನ ಮಗನಾದ ಅಕಬರನು ಚಿಕ್ಕವನಿದ್ದನು; ಅಲ್ಲದೆ ಅವನು ಆಗ ಲಾಹೋರದಲ್ಲಿರುತ್ತಿದ್ದನು. ಈ ಸಂಧಿಯಲ್ಲಿ ಹಿಮೂ ದಿಲ್ಲಿಯ ಮೇಲೆ ದಂಡೆತ್ತಿ ಹೋದನು. ಅವನಿಗೆ ಜಯವೂ ದೊರಕಿತು. ಆದರೆ ಈ ಯುದ್ಧದಲ್ಲಿ ಸೂರಶಹನು ತೀರಿಕೊಂಡನು; ಮತ್ತು ಹಿಮೂನೇ ದಿಲ್ಲಿಯ ರಾಜನಾದನು. ಅವನು **ವಿಕ್ರಮಾದಿತ್ಯ** ಅಂದರೆ **ಶೌರ್ಯದ ಸೂರ್ಯ** ಎಂಬ ಹೆಸರನ್ನಿಟ್ಟುಕೊಂಡು ಸಿಂಹಾಸನವನ್ನೇರಿದನು.

ಹಿಮೂ ದಿಲ್ಲಿಯ ಪಟ್ಟಕ್ಕೆ ಬಂದ ಬಳಿಕ ಆಡಳಿತದ ರೀತಿಯೇ ಬದಲಾಯಿತು; ರಾಜ್ಯದ ಸ್ವರೂಪವೂ ಬೇರೆಯಾಯಿತು. ದರಬಾರವು ಹಿಂದೂ ಪದ್ಧತಿಯಿಂದ ನಡೆಯ ತೊಡಗಿತು. ಅಂತಃಪುರದಲ್ಲಿಯ ಪರದೆಯ ನಿಯಮವು ಮಾಯವಾಯಿತು. ತುಲಸೀ ವೃಂದಾವನಗಳು ಅಲ್ಲಲ್ಲಿ ತಲೆಯೆತ್ತಿದವು. ಕುರಾನದ ಬದಲು ಪುರಾಣ ಪ್ರವಚನಗಳು ಆರಂಭವಾದವು. ಗುಡಿಗೋಪುರಗಳೂ ಉದ್ಯಾನಗಳೂ ವೈಭವದಿಂದ ಮೆರೆಯತೊಡಗಿದವು.

ಆದರೆ ಈ ವಿಕ್ರಮಾದಿತ್ಯನ ಕೈಯಲ್ಲಿ ರಾಜ್ಯವು ಬಹಳ ಕಾಲ ಉಳಿಯಲಿಲ್ಲ. ಕೆಲಕಾಲದಲ್ಲಿಯೇ ಅಕಬರನು ಅವನಿಗೆ ಎದುರು ನಿಂತನು. ಬಹರಾಮಖಾನನ ನೆರವಿನಿಂದ ಅವನು ದಿಲ್ಲಿಯ ಮೇಲೆ ದಾಳಿ ಮಾಡಿದನು. ಪಾನಿಪತ್ತಿನಲ್ಲಿ ಎರಡನೆಯ ಯುದ್ಧವಾಯಿತು. ಅದರಲ್ಲಿ ಹಿಮೂ ಸತ್ತನು. ದಿಲ್ಲಿ ಮತ್ತೆ ಮೊಗಲರ ವಶಕ್ಕೆ ಹೋಯಿತು.

## — ಅಭ್ಯಾಸ —

೧. ಹಿಮೂ ದಿಲ್ಲಿಯ ರಾಜನಾದದ್ದು ಹೇಗೆ ?

೨. ರಾಜನಾದ ಬಳಿಕ ಹಿಮೂ ಮಾಡಿದ ಕಾರ್ಯದ ಮಹತ್ವವೇನು ?



# ೩. ರಾಮಶಾಸ್ತ್ರಿ ಪ್ರಭುಣೆ



೧೯. ರಾಮಶಾಸ್ತ್ರಿ ಪ್ರಭುಣೆ

"ಏನೋ ರಾಮ್ಯಾ, ಯಾವ ಕಡೆ ನೋಡುತ್ತಿದ್ದೀ ? "

ಒಬ್ಬ ತರುಣ ನೀರಿನವನು ಒಬ್ಬ ಸಾವಕಾರನ ಕಾಲಿಗೆ ನೀರು ಹಾಕುತ್ತಿದ್ದನು. ನೀರಿನ ಧಾರೆ ಸ್ವಲ್ಪ ತಪ್ಪಿ ಬಿದ್ದದ್ದಕ್ಕೆ ಸಾವುಕಾರನು ಜರಿಸಿ ಕೇಳಿದನು.

"ಸ್ವಾಮಿ, ತಮ್ಮ ಕಿವಿಯೊಳಗಿನ ಬಾವಲಿಯನ್ನು ನೋಡುತ್ತಿದ್ದೆನು" ಎಂದು ಆ ತರುಣನು ಉತ್ತರವಿತ್ತನು.

"ಎಲೋ, ಟೊಣಪರಿಗೆ ಎಲ್ಲಿಯಾದರೂ ಇಂಥ ಒಡವೆ ಸಿಕ್ಕುವದುಂಟೇನೊ ? ಅದಕ್ಕೆ ವಿದ್ಯೆ ಬೇಕಾಗುತ್ತದೆ." ಎಂದು ಸಾವುಕಾರನು ಎಂದನು.

ರಾಮನು ಕೂಡಲೆ; "ಹಾಗಾದರೆ ನಾನೂ ವಿದ್ಯೆಯನ್ನು ಪಡೆದು, ನನ್ನ ನಾಡಿನಲ್ಲಿ ಮಾನವನ್ನು ಗಳಿಸುವೆನು." ಎಂದು ನುಡಿದನು.

ಮುಂದೆ ಸಾವುಕಾರನು ಈ ಮಾತುಕತೆಯನ್ನು ಮರೆತುಬಿಟ್ಟನು. ಆದರೆ ರಾಮನ ಮನಸ್ಸಿನಲ್ಲಿ ಮಾತ್ರ ಇದು ಯಾವಾಗಲೂ ಕಟೆಯುತ್ತಿತ್ತು. ತಾನು ಇನ್ನು ಈ ಉದ್ಯೋಗ ಮಾಡಬಾರದೆಂದು ಅವನು ನಿರ್ಧರಿಸಿದನು. ಕಾಶಿಗೆ ಹೋಗಿ ವಿದ್ಯೆಯನ್ನು ಸಂಪಾದಿಸಬೇಕೆಂದು. ಗೊತ್ತು ಮಾಡಿದನು. ಕಾಶಿಯೆಲ್ಲಿ! ಅವನೆಲ್ಲಿ! ಪ್ರವಾಸದ ಸೌಕರ್ಯಗಳಿಲ್ಲದ ಆ ಕಾಲದಲ್ಲಿ ಬಹಳ

ದಿನಗಳ ದಾರಿ; ಪ್ರವಾಸವೂ ಬಹಳ ಕಷ್ಟಕರವಾಗಿತ್ತು. ಕಾಶಿಯೆಂದರೆ ವಿದ್ಯೆಯ ತವರು ಮನೆಯಾದ್ದರಿಂದ ರಾಮನು ಹೇಗಾದರೂ ಮಾಡಿ ಅಲ್ಲಿಗೆ ಹೋಗಿಯೇ ಹೋದನು.

ರಾಮನಿಗೆ ವಿದ್ಯೆ ಕಲಿಯುವ ವಯಸ್ಸು ಮೀರಿತ್ತು. ಸಂಸ್ಕೃತ ಶಬ್ದಗಳನ್ನು ಚೆನ್ನಾಗಿ ಉಚ್ಚರಿಸಲಿಕ್ಕೆ ಕೂಡ ಬರುತ್ತಿರಲಿಲ್ಲ. ಆದರೂ ಅವನು ಹಟದಿಂದ ಹಗಲೂ ಇರುಳೂ ಅಭ್ಯಾಸ ಮಾಡಿದನು. ಸಾವಕಾಶವಾಗಿ ಅವನು ಸಂಸ್ಕೃತ ಭಾಷೆಯನ್ನು ಕಲಿತನು. ಇಷ್ಟೇ ಅಲ್ಲ; ಧರ್ಮ, ನ್ಯಾಯ ಮೊದಲಾದ ಶಾಸ್ತ್ರಗಳಲ್ಲಿಯೂ ಪಂಡಿತನಾದನು. ಪಾರಂಗತನಾದನು. ಇಷ್ಟು ಕಲಿಯುವದಕ್ಕೆ ಅವನಿಗೆ ಹನ್ನೆರಡು ವರುಷಗಳು ಹಿಡಿದವು. ಅಚಲವಾದ ಅವನ ದೀರ್ಘ ಪ್ರಯತ್ನವನ್ನು ಕಂಡು ಅಧ್ಯಾಪಕರೂ ಸಹಪಾಠಿಗಳೂ ಬೆರಗಾದರು. ಅವನು ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಪುಣೆಗೆ ಮರಳಿದನು. ಈಗವನು ಮೊದಲಿನ ರಾಮ್ಯಾ ಅಲ್ಲ; **ರಾಮಶಾಸ್ತ್ರಿ.**

ಹಿರಿಯ ಮಾಧವರಾಯನು ಆಗ ಪೇಶವೆಯಾಗಿದ್ದನು. ಆತನು ರಾಮಶಾಸ್ತ್ರಿಯನ್ನು ಸನ್ಮಾನದಿಂದ ಬರಮಾಡಿಕೊಂಡನು; ಮತ್ತು ಅವನಿಗೆ ಮುಖ್ಯ ನ್ಯಾಯಾಧೀಶನ ಪದವಿಯನ್ನು ಕೊಟ್ಟನು.

**ರಾಮಶಾಸ್ತ್ರಿ ಪ್ರಭುಣೆ** ಅತ್ಯಂತ ನಿಸ್ಪೃಹಿಯಾದ ಮನುಷ್ಯ. ಸ್ಪಷ್ಟವಾಗಿ ಮಾತನಾಡುವದು ಅವನ ಸ್ವಭಾವ. ಯಾವದೋ ಮಹತ್ವದ ಸರಕಾರೀ ಕೆಲಸದ ಸಲುವಾಗಿ ಎರಡು ಮೂರು ಸಲ ಮಾಧವರಾಯನ ಕಡೆಗೆ ಹೋದನು. ಆದರೆ ಮಾಧವರಾಯನು ಶಾಸ್ತ್ರಿ ಹೋದಾಗಲೆಲ್ಲ ಸ್ನಾನ ಸಂಧ್ಯಾವಂದನೆಗಳಲ್ಲಿಯೇ ತೊಡಗಿರುತ್ತಿದ್ದನು. ಆದುದರಿಂದ ಅವನು ಹಾಗೆಯೇ ತಿರುಗಿ ಬರಬೇಕಾಯಿತು. ಮಧ್ಯಾಹ್ನದ ಮೇಲೆ ಮತ್ತೆ ಹೋಗಿ ಪೇಶವೆಯನ್ನು ಕಂಡನು ಈ ಭೆಟ್ಟಿಯಲ್ಲಿ **"ನಾವಿಬ್ಬರೂ ಕಾಶಿಯಲ್ಲಿಯೇ ಹೋಗಿ ಇದ್ದು ಬಿಡುವಾ. ಅಂದರೆ ಎಲ್ಲ ವೇಳೆಯನ್ನು ಸ್ನಾನ-ಸಂಧ್ಯಗಳಲ್ಲಿಯೇ ಕಳೆಯಲಿಕ್ಕೆ ಆಗುತ್ತದೆ!"** ಎಂದು ಪೇಶ್ವೆಗೆ ಅಂದನು. ಈ ಮಾತಿನ ಮರ್ಮವು ಮಾಧವರಾಯನಿಗೆ ಹೊಳೆಯಿತು. **"ಹೌದು ಹೌದು, ರಾಜ್ಯ ಕಾರಭಾರ ಮಾಡುವದೇ ನಮಗೆ ಸ್ನಾನ-ಸಂಧ್ಯಾವಂದನೆ"** ಎಂದು ಆತನು ನುಡಿದನು. ಮತ್ತು ಮುಂದೆ ಆ ರೀತಿ ತನ್ನ ದಿನಚರಿಯನ್ನು ಸುಧಾರಿಸಿಕೊಂಡನು.

ಮಾಧವರಾಯನ ಅನಂತರದ ಪೇಶವೆಯಾದ ನಾರಾಯಣರಾಯನ ಕೊಲೆಯಾಯಿತು. ಇದನ್ನು ಮಾಡಿಸಿದವನು ಆತನ ಕಕ್ಕನಾದ ರಾಘೋಬ ನೆಂದು ಜನರೊಳಗೆ ಗುಜು ಗುಜು ಎದ್ದಿತು. ಆಗ ರಾಮಶಾಸ್ತ್ರಿಯಿಂದ ತಾನು ನಿರ್ದೋಷಿಯೆಂದು ತೀರ್ಮಾನಿಸಿಕೊಂಡರೆ ಎಲ್ಲವೂ ಸರಿ ಹೋಗುವ ದೆಂದು ರಾಘೋಬನಿಗೆ ಎನಿಸಿತು. ಅವನು ಶಾಸ್ತ್ರಿಯನ್ನು ಕರೆಯಿಸಿ ಹಾಗೆ ತಿಳಿಸಿದನು. ಯಾರ ದಾಕ್ಷಿಣ್ಯಕ್ಕೂ ಒಳಗಾಗದ ಶಾಸ್ತ್ರಿಯು ಸ್ಪಷ್ಟವಾಗಿ ಉತ್ತರ ಕೊಟ್ಟನು. **"ಈ ಕೊಲೆಗೆ ನಿಮ್ಮ ಸಂಬಂಧವು ಇರಲಿಕ್ಕೇ ಬೇಕು. ಮರಣದಂಡನೆಯೇ ಇದಕ್ಕೆ ತಕ್ಕ ಶಿಕ್ಷೆ. ನನಗೆ ನಿಮ್ಮ ಹಣವೂ ಬೇಡ, ಕೆಲಸವೂ ಬೇಡ. ಇಗೋ, ಇನ್ನು ಈ ಪುಣೆ ಯಲ್ಲಿಯೇ ಇರುವದಿಲ್ಲ!"**

ರಾಮಶಾಸ್ತ್ರಿ ನಿಜವಾಗಿಯೂ ಪೇಶ್ವೆಯರ ಆಶ್ರಯವನ್ನು ಬಿಟ್ಟು ತಮ್ಮ ಊರಿಗೆ, ಅಂದರೆ ಸಾತಾರೆಯ ಹತ್ತಿರವಿರುವ ಮಾಹುಲಿಗೆ ಹೊರಟು ಹೋದನು; ಅಲ್ಲಿಯೇ ಮುಂದಿನ ಆಯುಷ್ಯವನ್ನು ಸಾಧುವೃತ್ತಿಯಲ್ಲಿ ಕಳೆ ದನು.

## — ಅಭ್ಯಾಸ —

೧. ರಾಮಶಾಸ್ತ್ರಿ ಮಾಧವರಾಯನಿಗೆ ತಿಳಿಸಿಕೊಟ್ಟ ಮಾತು ಯಾವವು ?
೨. ರಾಮಶಾಸ್ತ್ರಿ ಪುಣೆಯನ್ನು ಬಿಟ್ಟಿದ್ದು ಏಕೆ ?



# ಭಾಗ ೪. ವೀರ ಮಹಿಳೆಯರು.

## ೧. ರೇಝಿಯಾ ರಾಣಿ

ದಿಲ್ಲಿಯ ದೊರೆಯಾದ ಸುಲ್ತಾನ ಅಲ್ತಮುಶಹನು ತೀರಿಕೊಂಡನು. ಇನ್ನು ಆತನ ಹಿರಿಯ ಮಗನು ಪಟ್ಟಕ್ಕೆ ಬರುವನೆಂದು ಜನರಲ್ಲಿ ಗಲಿಬಿಲಿ ಉಂಟಾಯಿತು. ಏಕೆಂದರೆ ಆಲಸ್ಯ, ವಿಲಾಸವೃತ್ತಿ ಮತ್ತು ನಿರ್ದಯತನ ಈ ಕೆಟ್ಟ ಗಣಗಳು ಆತನಲ್ಲಿ ಮನೆಮಾಡಿದ್ದವು. ಇಂಥವನಿಗೆ ಪಟ್ಟಗಟ್ಟು ವದಕ್ಕಿಂತ ಅವನ ತಂಗಿ ರೇಝಿಯಾಳನ್ನು ಸಿಂಹಾಸನದ ಮೇಲೆ ಕುಳ್ಳಿರಿಸ ಬೇಕೆಂದು ಜನರು ನಿಶ್ಚಯ ಮಾಡಿದರು.

ಅವಳ ತಂದೆ ಅಲ್ತಮುಶಹನಿಗೂ ಈ ಮಾತು ಹೊಳೆದಿತ್ತು. ಅವನು ಸಾಯುವ ಮೊದಲು ಮಂತ್ರಿಗಳಿಗೆ "ನನ್ನ ತರುವಾಯ ರೇಝಿಯಾಳಿಗೇ ಪಟ್ಟವನ್ನು ಕೊಡಿರಿ," ಎಂದಿದ್ದನು.

ಅದಕ್ಕೆ ಮಂತ್ರಿಗಳು, "ಮಹಾರಾಜರೇ, ತಮಗೆ ಗಂಡುಮಗ ಇದ್ದಾನೆ; ಆದರೂ ಹೆಣ್ಣು ಮಗಳಿಗೆ ಅಧಿಕಾರ ಕೊಡುತ್ತೀರಲ್ಲ! ಇದು ಹೇಗೆ?" ಎಂದು ಕೇಳಿದ್ದರು.



೨೦ ರೇಝಿಯಾ

"ಅವನಿಗೆ ರಾಜ್ಯ ಆಳುವದು ಹೇಗೆ ಎಂಬುದೇ ಗೊತ್ತಿಲ್ಲ. ನಮ್ಮ ರೇಝಿಯಾಳೇ ಜಾಣೆ. ನಾನು ಹೇಳುವ ಮಾತು ಸರಿಯಾದದ್ದೆಂದು ಮುಂದೆ ನಿಮಗೆ ತಿಳಿಯುವದು," ಎಂದು ದೊರೆ ಅಂದಿದ್ದನು.

**ರೇಝಿಯಾ** ಕಾರ್ಯಶೀಲೆ, ಹಿಡಿದು ವೆಚ್ಚ ಮಾಡುವಳು, ದಯಾ ಗುಣವುಳ್ಳವಳು. ಚಿಕ್ಕಂದಿನಿಂದ ಯಾವಾಗಲೂ ತಂದೆಯ ಜೊತೆಯಲ್ಲಿಯೇ

ಇರುತ್ತಿದ್ದಳು. ಅದರಿಂದ ಅರಸುತನವನ್ನು ನಡೆಸುವದು ಹೇಗೆಂಬ ತಿಳಿವಳಿಕೆ ಅವಳಿಗೆ ಚನ್ನಾಗಿಯೇ ಬಂದಿತ್ತು. ಒಮ್ಮೊಮ್ಮೆ ತಂದೆಯಿಂದ ತಪ್ಪಾಗುತ್ತಿತ್ತು; ಆಗ ಈ ಹುಡುಗಿ ತಟ್ಟನೆ ತಿದ್ದುತ್ತಿದ್ದಳು. ಬಡಬಗ್ಗರ ಸುಖ ದುಃಖಗಳನ್ನು ಆಕೆ ಮನಸುಗೊಟ್ಟು ವಿಚಾರಿಸುತ್ತಿದ್ದಳು. ಆದುದರಿಂದ ರೇಝಿಯಾ ಅಂದರೆ ಜನರಿಗೆ ಬಲು ಮೆಚ್ಚು. ಅಂತೆಯೇ ಅವರು ತಮ್ಮ ಇಚ್ಛೆಯ ಮೇರೆಗೆ ಆಕೆಯನ್ನು ದಿಲ್ಲಿಯ ರಾಣಿಯನ್ನಾಗಿ ಮಾಡಿದರು. ಎಲ್ಲರಿಗೂ ಆನಂದವಾಯಿತು.

ರೇಝಿಯಾ ಅರಸಿಯಾದ ಮೇಲೆ ತನ್ನ ಅಣ್ಣನನ್ನು ಸೆರೆಮನೆಯಲ್ಲಿಟ್ಟಳು. ಮತ್ತು ಅವನ ವಿಲಾಸಗಳಿಗೆ ತಡೆ ಹಾಕಿದಳು; ದಯಾಳುವಾದ ಅವಳು ಬಡಬಗ್ಗರಿಗೆ ಸಾಕಷ್ಟು ಅನ್ನ, ಅರಿವೆ, ಆಸರ ದೊರೆಯುವಂತೆ ಏರ್ಪಾಡು ಮಾಡಿದಳು.

ರೇಝಿಯಾ ಒಳ್ಳೇ ಧಿಟ್ಟೆಯೂ ಆಗಿದ್ದಳು. ಅವಳು ಗಂಡುಡಿಗೆ ಉಟ್ಟು ತೊಟ್ಟು ಓಲಗಕ್ಕೆ ಬರುತ್ತಿದ್ದಳು. ಹಾಗೆ ಗದ್ದುಗೆಯ ಮೇಲೆ ಠೀವಿಯಿಂದ ಆ ಮೂರ್ತಿ ಬಲು ಚನ್ನಾಗಿ ಒಪ್ಪುತ್ತಿತ್ತು. ರಾಜ್ಯದ ಆಡಳಿತದ ತನ್ನ ಕೆಲಸವನ್ನೆಲ್ಲ ಅವಳು ತಾನೇ ನೋಡಿಕೊಳ್ಳುತ್ತಿದ್ದಳು. ಅಧಿಕಾರಿಗಳು ಅವಳಿಗೆ ಅಂಜಿಕೊಂಡು ನಡೆಯುತ್ತಿದ್ದರು. ಜನರಿಗೆ ತೊಂದರೆಯಾಗುವ ಶಾಸನಗಳನ್ನೂ ಕೆಟ್ಟ ರೀತಿ ನಡತೆಗಳನ್ನೂ ಅವಳು ಪೂರ್ಣವಾಗಿ ತಡೆದು ಹಾಕಿದಳು. ಅವಳ ಆಳಿಕೆ ಎಲ್ಲರೂ ಮೆಚ್ಚುವಂಥದಾಗಿತ್ತು **ಹೆಣ್ಣು ಮಕ್ಕಳು ಕೂಡ ರಾಜ್ಯಕಾರಭಾರವನ್ನು ಉತ್ತಮವಾಗಿ ಸಾಗಿಸಬಲ್ಲರು.** ಎಂಬುದನ್ನು ರೇಝಿಯಾ ಜಗತ್ತಿಗೆ ತೋರಿಸಿದಳು.

ಆದರೆ ದುರ್ದೈವ! ಒಬ್ಬ ಹೆಂಗುಸು ತಮ್ಮನ್ನು ಆಳುವದು, ತಾವು ಅವಳಿಗೆ ಆಧೀನರಾಗಿ ನಡೆಯುವದು ಕೆಲವು ಜನ ಸರದಾರರಿಗೆ ಸೇರಲಿಲ್ಲ. ಅವರು ರೇಝಿಯಾಳನ್ನು ಕೊಲ್ಲಲು ಹೊಂಚು ಹಾಕಿದರು. ಕೊನೆಯಲ್ಲಿ ಅವಳ ಕೊಲೆಯಾಯಿತು.

## — ಅಭ್ಯಾಸ —

೧. ರೇಝಿಯಾ ಪ್ರಜೆಗಳನ್ನು ಹೇಗೆ ಜೋಪಾನ ಮಾಡುತ್ತಿದ್ದಳು ?
೨. ರೇಝಿಯಾ ರಾಣಿಯಲ್ಲಿದ್ದ ಗುಣಗಳನ್ನು ಹೇಳಿರಿ.



# ೨. ಚಾಂದಬೀಬಿ

## ಅಕಬರೊಡನೆ ದಿಟ್ಟತನದಿಂದ ಕಾದ ವೀರ ರಮಣಿ.

**ಚಾಂದಬೀಬಿ** ಭಾರತದ ಇತಿಹಾಸದಲ್ಲಿ ಪ್ರಕಾಶಿಸುವ ಒಬ್ಬ ವೀರ ನಾರಿ. ಅವಳು ಅಹಮ್ಮದನಗರದ ನಿಜಾಮನ ರಾಜಕುಮಾರಿ. ವಿಜಾಪುರದ ಅರಸು ಮಗನ ಹೆಂಡತಿ. ಗಂಡನು ತೀರಿಕೊಂಡುದರಿಂದ ಆಕೆ ತವರು ಮನೆಯಲ್ಲಿಯೇ ಇರುತ್ತಿದ್ದಳು. ಅಲ್ಲಿ ಸಿಂಹಾಸನದ ಅಧಿಕಾರದ ಬಗ್ಗೆ ನಡೆದಿದ್ದ ಒಳಜಗಳನ್ನು ಕುಶಲೆಯಾದ ಈ ಚಾಂದಬೀಬಿ ಬಗೆ ಹರಿಸಿದಳು.

ಇಷ್ಟೇಅಲ್ಲ; ತನ್ನ ತವರುಮನೆಯ ರಾಜ್ಯವನ್ನು ಚಾಂದಬೀಬಿ ಒಳ್ಳೇ ಪ್ರಸಂಗಾವಧಾನದಿಂದ, ಕೌಶಲ್ಯದಿಂದ ಉಳಿಸಿದಳು. ಈ ಅಹಮ್ಮದನಗರ ರಾಜ್ಯವನ್ನು ತನ್ನ ವಶಕ್ಕೆ ತೆಗೆದುಕೊಳ್ಳಬೇಕೆಂದು ದಿಲ್ಲೀಶ್ವರನಾದ ಅಕಬರನು ಬಯಸುತ್ತಿದ್ದನು. ಅದಕ್ಕಾಗಿ ಒಮ್ಮೆ ಅವನು ತನ್ನ ಮಗನಾದ **ಮುರಾದ**ನನ್ನು ದೊಡ್ಡ ದಂಡಿನೊಡನೆ ಕಳುಹಿದನು. ಮುರಾದನು ಬಂದು ಅಹಮ್ಮದನಗರ ಕೋಟೆಗೆ ಮುತ್ತಿಗೆ ಹಾಕಿದನು. ಮೊಗಲ ಸೈನಿಕರು ಸುರಂಗಗಳನ್ನು ಹಚ್ಚಿ ಕೋಟೆಯ ಗೋಡೆಗೆ ಡೊಗರು ಕೆಡವಿದರು. ಆಗ ಅಹಮ್ಮದನಗರದ ಸೈನಿಕರು ಎದೆಗುಂದಿದರು; ಕಾದುವದನ್ನು ಬಿಟ್ಟು ಓಡತೊಡಗಿದರು.

ಈ ಸಂಕಟಸಮಯದಲ್ಲಿ ಚಾಂದಬೀಬಿ ತನ್ನ ಸೈನಿಕರಲ್ಲಿ ಧೈರ್ಯವನ್ನು ತುಂಬಿದಳು; ಇಷ್ಟೇ ಅಲ್ಲ. ತಾನೇ ಎಲ್ಲರಿಗಿಂತ ಮುಂದಾಗಿ ಹಗೆಗಳನ್ನು ಎದುರಿಸುವದಕ್ಕೆ ಹೊರಟಳು. ಅವಳು ಮೈಯಲ್ಲಿ ಕವಚವನ್ನು ಧರಿಸಿದಳು;


೨೧. ಚಾಂದಬೀಬಿ

ಬಿಚ್ಚುಗತ್ತಿಯನ್ನು ಕೈಯಲ್ಲಿ ತೆಗೆದುಕೊಂಡಳು; ಮೊಗಲರು ಕೆಡವಿದ ಕಿಂಡಿಯ ಕಡೆಗೆ ವೀರಾವೇಶದಿಂದ ಧಾವಿಸಿದಳು. ಮತ್ತು ಸೈನಿಕರನ್ನು ಕುರಿತು, ಸೈನಿಕರೇ, "ನಿಲ್ಲಿರಿ ನಿಲ್ಲಿರಿ; ನೀವು ಯಾರ ಅನ್ನವನ್ನು ಉಂಡಿರುವಿರೋ ಅವರನ್ನು ಸಂಕಟ ಸಮಯದಲ್ಲಿ ಬಿಟ್ಟು ಹೋಗುವದು ಉಚಿತವೇ ? ನೋಡಿರಿ, ನಾನು ಹೆಂಗುಸು; ವೈರಿಗಳೊಡನೆ ಕಾದಾಡಲು ಸಿದ್ಧಳಾಗಿದ್ದೇನೆ" ಎಂದು ಹೇಳಿ ಕತ್ತಿಯನ್ನು ಝಳಪಿಸಿದಳು.

ನಿಜಾಮನ ದಂಡಾಳುಗಳಿಗೆ ನಾಚಿಕೆಯಾಯಿತು. ಚಾಂದಬೀಬಿಯನ್ನು ಕಂಡು ಅವರಿಗೆ ಧೈರ್ಯವೂ ಉಂಟಾಯಿತು. ಕಿಂಡಿಯ ಹತ್ತಿರ ಮತ್ತೆ ಕಾಳಗವು ಆರಂಭವಾಯಿತು. ಮೊಗಲ ಸೈನಿಕರಿಗೆ ಕೋಟೆಯೊಳಗೆ ಬರುವದಾಗಲಿಲ್ಲ. ರಾತ್ರಿಯಾದದ್ದರಿಂದ ಅವರು ತಮ್ಮ ಬೀಡಿಗೆ ತಿರುಗಿ ಹೋಗಬೇಕಾಯಿತು.

ಈ ಗೆಲವಿನಿಂದ ಚಾಂದಬೀಬಿ ಮೈಮರೆಯಲಿಲ್ಲ. ಈಗ ಮಲಗಿ ನಿದ್ದೆ ಮಾಡುವದು ತರವಲ್ಲ ಎಂದು ಅವಳಿಗೆನಿಸಿತು. "ಆ ಕಿಂಡಿಯನ್ನು ಈಗಲೇ ಮುಚ್ಚಿಬಿಡಬೇಕು;" ಎಂದು ಅವಳು ತನ್ನ ಸೈನಿಕರಿಗೆ ಅಪ್ಪಣೆಯಿತ್ತಳು. ಅವರು ಕೆಲವು ಉಪ್ಪಾರರನ್ನು ಕೂಡಿಕೊಂಡು ಬೆಳಗಾಗುವದರೊಳಗೆ ಕಿಂಡಿಯನ್ನು ಮುಚ್ಚಿ ಭದ್ರಗೊಳಿಸಿದರು. ಆಗ ಸೈನಿಕರಿಗೆ ಇನ್ನಷ್ಟು ಧೈರ್ಯವಾಯಿತು.

ಮರುದಿನ ಮುಂಜಾನೆ ಮೊಗಲ ಸೈನಿಕರು "ಇನ್ನು ಕೋಟೆಯೊಳಗೆ ನುಗ್ಗುವಾ; ನಮ್ಮ ದೊಡ್ಡ ಸೈನ್ಯವು ಮಧ್ಯಾಹ್ನದೊಳಗೇ ಕೋಟೆಯನ್ನು ಸ್ವಾಧೀನ ಪಡಿಸಿಕೊಳ್ಳುವಾ;" ಎಂದು ಉತ್ಸಾಹದಿಂದ ಬಂದರು. ಕೋಟೆಗೋಡೆಯ ಹತ್ತಿರ ಬಂದು ನೋಡುತ್ತಾರೆ. ಕಿಂಡಿ ಗಟ್ಟಿಯಾಗಿ ಮುಚ್ಚಿಹೋಗಿದೆ ! ಇದನ್ನು ಕೇಳಿ ಮುರಾದನು ಬೆರಗಾದನು. ಇಂಥ ಕರ್ತವ್ಯನಿಷ್ಠರಾದ ಸೈನಿಕರನ್ನು ಗೆಲ್ಲುವದು ಸುಲಭವಲ್ಲ ಎಂದು ಅವನಿಗೆನಿಸಿತು. ಅವನು ಚಾಂದಬೀಬಿಯೊಡನೆ ಒಡಂಬಡಿಕೆಯ ಮಾತುಕತೆ ಆರಂಭಿಸಿದನು.

ಅವಳೂ ದೂರದೃಷ್ಟಿಯಿಂದ ವಿಚಾರಮಾಡಿದಳು. ಅವಳ ದಂಡು ದೊಡ್ಡ ದಿರಲಿಲ್ಲ. ಆದುದರಿಂದ ಸ್ವಲ್ಪ ಪ್ರದೇಶವನ್ನು ದಿಲ್ಲೀಶ್ವರನಿಗೆ ಕೊಡಲೊಪ್ಪಿ ಮೊಗಲರೊಡನೆ ಒಪ್ಪಂದ ಮಾಡಿಕೊಂಡಿಳು.

ಚಾಂದಬೀಬಿ ನಗರರಾಜ್ಯವನ್ನು ರಕ್ಷಿಸಿದಳೇನೋ ನಿಜ. ಆದರೆ ದುರ್ದೈವ! ಅವಳ ಹೆಚ್ಚಳ ಕೆಲವು ಸರದಾರರಿಗೆ ಸಹಿಸಲಿಲ್ಲ. ಅವರು ಅವಳ ವಿರುದ್ಧವಾಗಿ ಕಾರಸ್ಥಾನ ಹೂಡಿ, ಕೆಲವು ವರುಷಗಳಲ್ಲಿ ಅವಳನ್ನು ಕೊಲೆ ಮಾಡಿಸಿದರು.

### — ಅಭ್ಯಾಸ —

೧. ಚಾಂದಬೀಬಿ ಯಾವ ಪ್ರಸಂಗದಲ್ಲಿ ಪರಾಕ್ರಮವನ್ನು ತೋರಿಸಿದಳು ?
೨. ಮುರಾದನು ಆವಳೊಳನೆ ಏಕೆ ಒಡಂಬಡಿಕೆ ಮಾಡಿಕೊಂಡನು ?
೩. ಚಾಂದಬೀಬಿಯಂತೆ ಸರದಾರರ ಹೊಟ್ಟೆಕಿಚ್ಚಿಗೆ ಗುರಿಯಾಗಿ ಸತ್ತ ಇನ್ನೊಬ್ಬ ವೀರ ಮಹಿಳೆಯ ಹೆಸರು ಹೇಳಿರಿ.



## ೩. ಝಾಂಸಿ ಲಕ್ಷ್ಮೀಬಾಯಿ

**ಪರಕೀಯರ ದಾಸ್ಯವನ್ನು ನಾನೆಂದೂ ಸ್ವೀಕರಿಸಲಾರೆ. ಈ ರಾಜ್ಯ ನನ್ನದು ಕೊನೆಯವರೆಗೂ ನನ್ನದಾಗಿ ಉಳಿಯುವದು, ಉಳಿಯಲೇಬೇಕು.**

ದತ್ತಕ ತೆಗೆದುಕೊಂಡಾಗ ಇಂಗ್ಲೀಷರು ಎತ್ತಿದ ನಿರ್ಬಂಧಕ್ಕೆ ಬರೆದ ಪ್ರತ್ಯುತ್ತರದ ಉಕ್ತಿಗಳಿವು.

**ಎರಡನೆಯ ಬಾಜೀರಾಯನಿಗೆ** ಇಬ್ಬರು ಮಕ್ಕಳು. **ನಾನಾ ಸಾಹೇಬನೊಬ್ಬ. ಬಾಳಾಸಾಹೇಬನೊಬ್ಬ.** ತಾಂಬೆ ಮೋರೋಪಂತ ನೆಂಬವನು ಬಾಜೀರಾಯನಲ್ಲಿ ಕೆಲಸಕ್ಕಿದ್ದನು. ಅವನಿಗೆ ಒಬ್ಬ ಮಗಳಿದ್ದಳು; ಅವಳ ಹೆಸರು **ಮನೂಕಾಯಿ.** ಮೂವರೂ ಓರಿಗೆಯವರು. ಕೂಡಿಯೇ ಆಡುತ್ತಿದ್ದರು. ಕುದುರೆಯ ಸವಾರಿ, ಕಾಳಗ, ಕತ್ತಿ ತಿರುವು

ವದು, ತುಬಾಕಿಯಿಂದ ಗುರಿ ಹೊಡೆಯುವದು ಇವೇ ಮುಂತಾದವು ಅವರ ಚಿಕ್ಕಂದಿನ ಆಟಗಳು.

ಮುಂದೆ ಮನೂತಾಯಿಯ ಮದುವೆಯಾಯಿತು. ಆಕೆ **ಝಾಂಸಿ** ಸಂಸ್ಥಾನದ ರಾಜನಾದ **ಗಂಗಾಧರರಾಯನ** ಪತ್ನಿಯಾದಳು. ಆಗ ಝಾಂಸಿಯ ಆಡಳಿತವು ಆಂಗ್ಲರ ಅಧೀನವಾಗಿತ್ತು. ಈ ಮದುವೆಯ ವೇಳೆಗೇ ಆಡಳಿತವು ಗಂಗಾಧರರಾಯನ ಕೈಗೆ ತಿರುಗಿ ಬಂದಿತು. ಮನೂತಾಯಿಯ ಕಾಲ್ಗುಣದಿಂದಲೇ ರಾಜ್ಯಲಕ್ಷ್ಮಿ ಮರಳಿ ದೊರಕಿದಳೆಂದು, ಅವಳಿಗೆ **"ಲಕ್ಷ್ಮೀಬಾಯಿ"** ಎಂದು ಹೆಸರನ್ನಿಟ್ಟರು.



೨೨. ಝಾಂಸಿ ಲಕ್ಷ್ಮೀಬಾಯಿ

ರಾಣೀ ಲಕ್ಷ್ಮೀಬಾಯಿ ಕುದುರೆಯೇರಾಟದಲ್ಲಿ ಗಟ್ಟಿಗಳು; ಕುದುರೆಯ ಪರೀಕ್ಷೆಯನ್ನೂ ಮಾಡಲು ಬಲ್ಲವಳು. ಒಮ್ಮೆ ಕುದುರೆ ವ್ಯಾಪಾರಗಾರನೊಬ್ಬನು ಝಾಂಸಿಗೆ ಬಂದನು. ಅವನಲ್ಲಿ ಎರಡು ಕುದುರೆಗಳಿದ್ದವು. ನೋಡುವದಕ್ಕೆ ಅವೆರಡೂ ಒಂದೇ ಮಾಟದವು ಮತ್ತು ಚುರುಕು ಇದ್ದವು. ರಾಣಿ ಒಮ್ಮೆ ಒಂದು ಕುದುರೆಯನ್ನು ಏರಿ ತಿರುಗಾಡಿ ಬಂದಳು; ಬಳಿಕ ಇನ್ನೊಂದನ್ನು ಏರಿ ತಿರುಗಾಡಿ ಬಂದಳು. ಆ ಮೇಲೆ ಅವಳು, "ಒಂದು ಕುದುರೆಯ ಬೆಲೆ ಐವತ್ತು ರೂಪಾಯಿ, ಇನ್ನೊಂದರದು ಸಾವಿರ" ಎಂದು ಹೇಳಿದಳು. "ಎರಡು ಕುದುರೆಗಳೂ ಒಂದೇ ಬಗೆಯಾಗಿವೆ; ಬೆಲೆಯನ್ನೇಕೆ

ಇಷ್ಟು ಹೆಚ್ಚು ಕಡಿಮೆ ಕಟ್ಟಿದಿರಿ ?" ಎಂದು ಜನರು ಕೇಳಿದರು. "ಇವುಗಳಲ್ಲಿ ಒಂದು ಹಿರಿದಾದ ಕುದುರೆ ಇನ್ನೊಂದು ಅದರಂತೆಯೇ ಕಾಣುತ್ತಿದ್ದರೂ ಅದರ ಎದೆ ಗಟ್ಟಿಯಿಲ್ಲ; ದೂರದ ಪ್ರಯಾಣಕ್ಕೆ ಅದು ನಿರುಪಯೋಗಿ" ಎಂದು ಲಕ್ಷ್ಮೀಬಾಯಿ ಹೇಳಿದಳು. ಕುದುರೆ ವ್ಯಾಪಾರಿ ಆಕೆಯ ಅಶ್ವಪರೀಕ್ಷೆಯ ಜ್ಞಾನವನ್ನು ಕೊಂಡಾಡಿದನು; ಆಕೆ ಕಟ್ಟಿದ ಬೆಲೆಗೆ ಅವನ್ನು ಮಾರಿದನು.

ಲಕ್ಷ್ಮೀಬಾಯಿಗೆ ಒಂದು ಗಂಡು ಮಗು ಹುಟ್ಟಿತ್ತು; ಆದರೆ ಚಿಕ್ಕದಿರುವಾಗಲೇ ತೀರಿಕೊಂಡಿತು. ಆದುದರಿಂದ ಗಂಗಾಧರರಾಯನು ಒಂದು ಹುಡುಗನನ್ನು ದತ್ತಕ ತೆಗೆದುಕೊಂಡನು; ಅವನ ಹೆಸರು ದಾಮೋದರ. ಮುಂದೆ ಶೀಘ್ರದಲ್ಲಿಯೆ ಗಂಗಾಧರರಾಯನು ಸ್ವರ್ಗವಾಸಿಯಾದನು. ಲಕ್ಷ್ಮೀ-ಬಾಯಿಯ ಮೇಲೆ ಮುಗಿಲೇ ಕುಸಿದುಬಿದ್ದಂತಾಯಿತು.

ತನ್ನ ದತ್ತಕ ಮಗನ ಮುಖವನ್ನು ನೋಡುತ್ತ ತನ್ನ ಪ್ರೀತಿಯ ಪ್ರಜೆಗಳ ಯೋಗಕ್ಷೇಮದ ಕಡೆ ಮನಸ್ಸು ಹಾಕುತ್ತ ಲಕ್ಷ್ಮೀಬಾಯಿ ತನ್ನ ದುಃಖವನ್ನು ಮರೆಯಲು ಹವಣಿಸುತ್ತಿದ್ದಳು. ಆದರೆ ಅಷ್ಟರೊಳಗೆ ಆಂಗ್ಲರು ಒಂದು ಅಪ್ಪಣೆ ಹೊರಡಿಸಿದರು. ಅದು ಝಾಂಸಿ ಸಂಸ್ಥಾನವನ್ನು ವಿಲೀನಗೊಳಿಸುವ ಅಪ್ಪಣೆಯಾಗಿತ್ತು. ವೀರ ರಾಣಿಗೆ ಇದು ಅಸಹನೀಯವಾಯಿತು. ಅದಕ್ಕೆ ಝಾಂಸಿ ರಾಣಿಯು ಪಾಠದ ಮೊದಲಲ್ಲಿ ಕೊಟ್ಟಂತೆ ಉತ್ತರ ವಿತ್ತಳು.

ಕೂಡಲೆ ಆಂಗ್ಲ ಅಧಿಕಾರಿ ಝಾಂಸಿಯ ಮೇಲೆ ದಂಡೆತ್ತಿ ಬಂದನು. ಕೋಟೆಗೆ ಮುತ್ತಿಗೆ ಬಿದ್ದಿತು. ಲಕ್ಷ್ಮೀಬಾಯಿ ರಾಜ್ಯವನ್ನು ಉಳಿಸಿಕೊಳ್ಳಲು ಎಷ್ಟೋ ದಿನ ಹೋರಾಡಿದಳು. ಕೊನೆಗೆ ಝಾಂಸಿ ಕೋಟೆ ಆಂಗ್ಲರ ಕೈಸೇರಿತು. ಆದರೆ ಕೋಟೆಯನ್ನು ಅವರು ವಶಪಡಿಸಿಕೊಳ್ಳುವ ಮೊದಲೇ ರಾಣಿ ಮಗನೊಡನೆ ಅಲ್ಲಿಂದ ಪಾರಾದಳು. ಅವಳು ಮಗುವನ್ನು ತನ್ನ ಬೆನ್ನಿಗೆ ಕಟ್ಟಿಕೊಂಡು, ಕುದುರೆಯನ್ನೇರಿ ಕೋಟೆಯಿಂದ ಧುಮ್ಮಿಕ್ಕಿದಳು. ಅತಿ ಕಷ್ಟದಿಂದ ಯುದ್ಧಮಾಡಿದಳು. ಆ ಯುದ್ಧದಲ್ಲಿಯೇ ಅವಳು ಮರಣ ಹೊಂದಿದಳು.

ಹೆಂಗುಸು, ಮೂವತ್ತೆರಡು ವರುಷದ ರಾಣಿ ಲಕ್ಷ್ಮೀಬಾಯಿ ಶತ್ರುಗಳಿಗೆ ಶರಣೆನ್ನಲಿಲ್ಲ. ಆಂಗ್ಲರೊಡನೆ ಕಾದಾಡಿ ವೀರಸ್ವರ್ಗವನ್ನು ಪಡೆದಳು; **ದೇಶದ ಕೀರ್ತಿಯನ್ನು ಹೆಚ್ಚಿಸಿದಳು.**

ಈಕೆಯ ಹೆಸರು ಇಂದಿಗೂ ಪ್ರತಿಯೊಬ್ಬ ಸ್ತ್ರೀ ಪುರುಷರ ಬಾಯ-ಲ್ಲಿಯೂ ಇದೆ.

## — ಅಭ್ಯಾಸ —

೧. ಲಕ್ಷ್ಮೀಬಾಯಿಯ ಬಾಲ್ಯದ ಆಟಗಳನ್ನು ಹೇಳಿರಿ.

೨. ಝಾಂಸಿ ರಾಣಿಯು ಆಂಗ್ಲರಿಗೆ ಕೊಟ್ಟ ಉತ್ತರ ಯಾವದು ?

೩. ಆಂಗ್ಲರೊಡನೆ ಲಕ್ಷ್ಮೀಬಾಯಿ ಏಕೆ ಹೋರಾಡಿದಳು ?

೪. ಝಾಂಸಿ ಕೋಟೆಯಿಂದ ಲಕ್ಷ್ಮೀಬಾಯಿ ಹೇಗೆ ಪಾರಾದಳು ?



# ಭಾಗ ೫. ಸ್ವಾತಂತ್ರ್ಯ ವೀರರು.

## ೧. ದಾದಾಭಾಯಿ ನವರೋಜಿ

ಈಗ ನಾವು ಸ್ವತಂತ್ರ ಭಾರತದ ಪ್ರಜೆಗಳಾಗಿದ್ದೇವೆ. ಈ ಸ್ವಾತಂತ್ರ್ಯ ವನ್ನು ದೊರೆಕಿಸುವದಕ್ಕಾಗಿ ಭಾರತದ ಮುಂದಾಳುಗಳು ಕಳೆದ ಅರವತ್ತು ವರುಷ ಆಂಗ್ಲರೊಡನೆ ಹೋರಾಡಿದರು. ಬೇರೆ ಬೇರೆ ಜನರೂ ಬೇರೆ ಬೇರೆ ಸಂಸ್ಥೆಗಳೂ ತಮ್ಮ ತಮ್ಮ ಗುರಿಯಿಂದ ಸ್ವಾತಂತ್ರ್ಯಕ್ಕಾಗಿ ದುಡಿದರು. ಅಂಥ ಸಂಸ್ಥೆಗಳಲ್ಲಿ ಅಖಿಲ ಭಾರತ ರಾಷ್ಟ್ರೀಯ ಮಹಾಸಭೆ ಎಂದರೆ **ಕಾಂಗ್ರೆಸ್ಸು** ಅಗ್ರಗಣ್ಯವಾದದ್ದು.

ಈ ಕಾಂಗ್ರೆಸ್ಸನ್ನು ಸ್ಥಾಪಿಸಿದ ಭಾರತೀಯ ನಾಯಕರಲ್ಲಿ **ದಾದಾ ಭಾಯಿ**ಯವರು ಪ್ರಮುಖ ದೇಶಭಕ್ತರು. ೧೮೮೫ ನೆಯ ಇಸವಿಯಲ್ಲಿ ಈ ನಾಯಕರು, ಭಾರತದ ರಾಜ್ಯದ ಆಡಳಿತವು ಭಾರತೀಯರ ಕೈಯಲ್ಲಿ ಬರಬೇ ಕೆಂಬ ಉದ್ದೇಶದಿಂದ ಮುಂಬಯಿಯಲ್ಲಿ ಒಂದು ಸಂಸ್ಥೆಯನ್ನು ಸ್ಥಾಪಿಸಿ ದರು. ಅಧಿಕಾರದ ಬಗ್ಗೆ ಸರಕಾರವನ್ನು ಬೇಡಿಕೊಳ್ಳುವದು, ಜನರಲ್ಲಿ ಜಾಗೃತಿಯನ್ನು ಉಂಟುಮಾಡುವದು, ಜನತೆಗೆ ಸುಖವಾಗುವಂಥ ಶಾಸನ ಗಳಾಗುವಂತೆ ಪ್ರಯತ್ನಿಸುವದು, ಈ ಸಂಸ್ಥೆಯ ಮೊದಮೊದಲಿನ ಚಟುವಟಿಕೆ ಗಳಾಗಿದ್ದವು. ಈ ಸಂಸ್ಥೆಯೇ–ಇಂದಿನ ಕಾಂಗ್ರೆಸ್ಸು.

ಕಾಂಗ್ರೆಸ್ಸಿನ ಸ್ಥಾಪಕರಲ್ಲಿ ಹಿರಿಯರಾದ **ದಾದಾಭಾಯಿ**ಯವರ ಹುಟ್ಟೂರು ಗುಜರಾಥ ಪ್ರಾಂತದ **ನವಸಾರಿ.** ಅಲ್ಲಿಯ ಒಂದು ಫಾರಸೀ ಯರ ಕುಟುಂಬದಲ್ಲಿ ಇವರ ಜನನವಾಯಿತು. ಇವರ ತಂದೆ **ನವರೋಜಿ, ತಾಯಿ ಮಾಣಕಾಬಾಯಿ.** ಮನೆತನದಿಂದ ಬಡವರು. ಆದರೆ ದಾದಾಭಾಯಿ ಉದ್ಯೋಗಪ್ರಿಯರು, ಒಳ್ಳೆ ಬುದ್ಧಿಶಾಲಿಗಳು. ತುಂಬಾ ಶಿಕ್ಷಣವನ್ನು ಪಡೆದು ಮೊದಲು ಶಿಕ್ಷಕ ವೃತ್ತಿಯನ್ನು ಕೈಕೊಂಡರು. ಬಳಿಕ ವ್ಯಾಪಾರವನ್ನು

ಕೈಕೊಂಡು ಅದರಲ್ಲಿಯೂ ಪ್ರಸಿದ್ಧಿ ಪಡೆದರು. ಆ ಮೇಲೆ ಕೆಲಕಾಲ ಬಡೋದಾ ಸಂಸ್ಥಾನದ ಪ್ರಧಾನರಾದರು. ಇಷ್ಟೇ ಅಲ್ಲ, ಇಂಗ್ಲಂಡಿಗೂ ಹೋದರು, ಅಲ್ಲಿಯ ಜನರು ಇವರನ್ನು ಪಾರ್ಲಿಮೆಂಟಿನ ಸಭಾಸದರನ್ನಾಗಿ ಆರಿಸಿದರು.



೨೩. ದಾದಾಭಾಯಿ ನವರೋಜಿ

ಭಾರತೀಯರ ಬಡತನವು ದಾದಾಭಾಯಿಯವರ ಹೃದಯವನ್ನು ಬಹಳ ಕೊರೆಯುತ್ತಿತ್ತು. ಅದಕ್ಕಾಗಿ ಅವರು ಹೇಳುತ್ತಿದ್ದರು. ಪರದೇಶದ ಒಡವೆಗಳನ್ನು ಕೊಂಡು ಅಲ್ಲಿಗೆ ಹಣವನ್ನು ಕಳಿಸುವದಕ್ಕಿಂತ ಅದನ್ನು ನಮ್ಮ ನಾಡಿನ ಒಡವೆಗಳನ್ನೇ ಕೊಳ್ಳಬೇಕು; ಅಂದರೆ, ನಮ್ಮ ನಾಡಿನ ದುಡ್ಡು

ನಮ್ಮ ನಾಡಿನ ಬಡ ಕೆಲಸಗಾರರಿಗೇ ಸಲ್ಲುತ್ತದೆ. ಮತ್ತು ನಮಗೆ ಬೇಕಾಗು ವದನ್ನು ನಾವೇ ಪೂರಯಿಸಿಕೊಂಡರೆ ಅದರಿಂದ ನಮ್ಮ ಜೀವನವೂ ಸುಖಿ ಯಾಗುವದು.

ದಾದಾಭಾಯಿಯವರು ಸ್ವರಾಜ್ಯದ ಬೇಡಿಕೆಯ ಚಳವಳಿಯನ್ನು ಅತ್ಯಂತ ಪರಿಣಾಮಕರವಾಗಿ ಆರಂಭಿಸಿದರು. ಅವರು ಬಿತ್ತಿದ ಬೀಜದ ಮಧುರ ಫಲವನ್ನು ನಾವಿಂದು ಉಣ್ಣುತ್ತಿದ್ದೇವೆ. ದಾದಾಭಾಯಿಯವರ ನೆನಹು ಭಾರತೀಯರ ಹೃದಯದಲ್ಲಿ ಶಿಲಾಶಾಸನವಾಗಿ ಉಳಿದಿರುವದು.

## — ಅಭ್ಯಾಸ —

೧. ದಾದಾಭಾಯಿಯವರ ಸಂದೇಶವು ಯಾವದು ?
೨. ರಾಷ್ಟ್ರೀಯ ಮಹಾಸಭೆಯ ಉದ್ದೇಶವೇನು ?
೩. ದಾದಾಭಾಯಿಯವರು ಮಾಡಿದ ಉಪದೇಶಯಾವದು ?

# ೨. ಲೋಕಮಾನ್ಯ ತಿಲಕ

" ಎರಡು ಪಾತ್ರೆಗಳಲ್ಲಿ ಏಕೋ ಅನ್ನ ? ಒಂದರೊಳಗೇ ಇಬ್ಬರ ಅನ್ನವೂ ಆಗುತ್ತಿರಲಿಲ್ಲವೆ ?"

" ಇಲ್ಲ ಸ್ವಾಮೀ, ಈ ಅನ್ನವು ನಿಮ್ಮ ಸಲುವಾಗಿ ಇದು ಅಂಬೆಮೋರಿ ಅಕ್ಕಿಯ ಅನ್ನವಿದು. ಇದರೊಳಗಿನ ಅನ್ನವು ನನಗಾಗಿ. ಇದು ಕಗ್ಗ ಅಕ್ಕಿಯ ಅನ್ನ. ಸರಕಾರದ ಅಪ್ಪಣೆ "

" ಛೆ, ನಾಳೆಯಿಂದ ಹೀಗೆ ಮಾಡಬೇಡ. ನನಗೆಂದು ಕೊಟ್ಟ ಅಕ್ಕಿ ಯನ್ನೇ ಇಬ್ಬರಿಗೂ ಮಾಡು ಅನ್ನ ಸ್ವಲ್ಪ ಕಡಿಮೆಯಾದರೂ ನಡೆಯುತ್ತದೆ."

**ಲೋಕಮಾನ್ಯ** ತಿಲಕರಿಗೂ ಅವರ ಅಡಿಗೆಯವನಿಗೂ ನಡೆದ ಸಂಭಾಷಣೆಯಿದು. ತಿಲಕರೂ ಒಬ್ಬ ಸೆರೆಯಾಳು, ಅಡಿಗೆಯವನೂ ಒಬ್ಬ ಸೆರೆಯಾಳು, ಇದು ಮಂಡಾಲೆ ಸೆರೆಮನೆಯೊಳಗಿನ ಪ್ರಸಂಗವು. ೧೯೦೮ ನೆಯ ಇಸವಿಯಲ್ಲಿ ಅವರನ್ನು ಸರಕಾರವು ಅಲ್ಲಿ ಸೆರೆಯಿಟ್ಟಿತ್ತು; ಅವರಿಗೆ ಅಡಿಗೆಮಾಡಲು ಒಬ್ಬ ಸೆರೆಯಾಳನ್ನು ಕೊಟ್ಟಿತ್ತು. ಅವನು ಅವರಿಗೆ ಅತಿ ಭಕ್ತಿಯಿಂದ ಅಡಿಗೆ ಮಾಡಿ ಬಡಿಸುತ್ತಿದ್ದನು. ಒಂದು ದಿನ ಹನ್ನೊಂದು

ಹೊಡೆಯಿತು; ಲೋಕಮಾನ್ಯರು ಭಗವದ್ಗೀತೆಯ ಅರ್ಥವನ್ನು ವಿವರಿಸುವ ಗ್ರಂಥವನ್ನು ಬರೆಯುತ್ತಲಿದ್ದರು; ಅವರು ಗೀತೆಯನ್ನು ಬದಿಗೆ ಸರಿಸಿಟ್ಟು ಕೆಳಗಿಳಿದುಹೋಗಿ ಮಣಿಯ ಮೇಲೆ ಕುಳಿತುಕೊಂಡರು; ಅನ್ನವನ್ನು ಎರಡು ಪಾತ್ರೆಗಳಲ್ಲಿ ಮಾಡಿದ್ದರ ಡೆಗೆ ಅವರ ಲಕ್ಷವು ಹೋಯಿತು. ಆಗ ಅವರು ಮೇಲಿನಂತೆ ಪ್ರಶ್ನಿಸಿದರು. ಹೀಗೆ ತಿಲಕರು ತಮ್ಮ ಅಕ್ಕಿಯಲ್ಲಿ ಇನ್ನೊಬ್ಬ ಸೆರೆಯಾಳಿಗೆ ಪಾಲು ಕೊಟ್ಟರು. ಅವರ ಹೊರಗಿನ ಜೀವನವು ತಮ್ಮ ದೇಶಬಂಧುಗಳ ವಿಷಯದಲ್ಲಿ ಸಹಾನುಭೂತಿಯುಳ್ಳದ್ದಾಗಿತ್ತು ಅವರು ಜನತೆಗೆ ತೋರಿಸಿದ್ದು ಇದೇ ಆದರ್ಶವೃತ್ತಿ.



ಸ್ವರಾಜ್ಯವು ನಮ್ಮ ಜನ್ಮಸಿದ್ಧ ಹಕ್ಕು ಅದನ್ನು ನಾವು ದೊರಕಿಸಿಯೇ ತೀರುವೆವು.

೨೪. ಲೋಕಮಾನ್ಯ ತಿಲಕ

ಆಂಗ್ಲರ ಆಳಿಕೆಯಿಂದ ಹಿಂದುಸ್ತಾನವನ್ನು ಬಿಡುಗಡೆ ಮಾಡಬೇಕೆಂದು ಜನರಿಗೆ ತಿಳಿಹೇಳುವದಕ್ಕಾಗಿ ತಿಲಕರು ದೇಶವನ್ನೆಲ್ಲ ಸುತ್ತಾಡಿದರು. ಎಲ್ಲ ಕಡೆಗಳಲ್ಲಿಯೂ ಭಾಷಣವಿತ್ತರು. ಈ ತಮ್ಮ ಸಂದೇಶವನ್ನು, **"ಸ್ವರಾಜ್ಯವು ನನ್ನ ಜನ್ಮಸಿದ್ಧವಾದ ಹಕ್ಕು ಅದನ್ನು ನಾನು ದೊರಕಿಸಿಯೇ ತೀರುವೆನು"** ಎಂಬ ಮಾತನ್ನು ಜನರಿಗೆ ಬಿಂಬಿಸುವದಕ್ಕಾಗಿ ಅವರು, ಮರಾಠೀ ಭಾಷೆಯಲ್ಲಿ **ಕೇಸರಿ** ಹಾಗೂ ಆಂಗ್ಲಭಾಷೆಯಲ್ಲಿ **ಮರಾಠಾ** ಎಂಬ ಎರಡು ಪತ್ರಿಕೆಗಳನ್ನು ಹೊರಡಿಸಿದರು. ಸರಕಾರದ ವಿರುದ್ಧವಾಗಿ ಪ್ರಕಟವಾಗುತ್ತಿದ್ದ ಅವರ ಲೇಖನಗಳನ್ನು ಜನರು ಒಳ್ಳೇ ಆಸ್ಥೆಯಿಂದ ಓದುತ್ತಿದ್ದರು. ಅವರ ವಿಚಾರಗಳು ಜನರ ಮನಸ್ಸನ್ನು ಹಿಡಿದವು. ಸ್ವರಾಜ್ಯವನ್ನು ಗಳಿಸಿಕೊಳ್ಳಬೇಕೆಂಬ ಜಾಗೃತಿ ನಾಡಿನಲ್ಲಿ ಉಂಟಾಯಿತು. ಜನತೆಯಿಂದ **"ಲೋಕಮಾನ್ಯ"**

ಎಂಬ ಗೌರವದ ಪದವಿಯು ತಿಲಕರಿಗೆ ದೊರೆಯಿತು. ಅವರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆಯ್ಕೆ ಹೊಂದಿದರು. ಅವರು ರಾಷ್ಟ್ರಕ್ಕೆ ನಾಲ್ಕು ಮುತ್ತಿನಂಥ ಮಾತುಗಳನ್ನು ಹೇಳಿದರು. **೧. ದೇಶಿಯ ವಸ್ತುಗಳನ್ನೇ ಉಪಯೋಗಿಸಿರಿ. ೨. ವಿದೇಶಿಯ ವಸ್ತುಗಳಿಗೆ ಬಹಿಷ್ಕಾರ ಹಾಕಿರಿ. ೩. ಹುಡುಗರಿಗೆ ರಾಷ್ಟ್ರೀಯ ಶಾಲೆಗಳಲ್ಲಿ ಶಿಕ್ಷಣ ಕೊಡಿರಿ. ೪. ಸ್ವರಾಜ್ಯ ಸಂಪಾದನೆಗಾಗಿ ಬೇಕಾದ ಸ್ವಾರ್ಥತ್ಯಾಗವನ್ನೂ ಮಾಡಿರಿ.**

ಲೋಕಮಾನ್ಯರ ಸಂದೇಶದಿಂದ ಜನತೆ ಎಚ್ಚತ್ತುದನ್ನು ಕಂಡು ಸರಕಾರವು ಬೆದರಿತು. ತಿಲಕರನ್ನು ಕಟ್ಟಳೆಗೆ ಗುರಿಮಾಡಿ, ಅವರಿಗೆ ಆರು ವರುಷಗಳ ಕಾರಾಗ್ರಹವಾಸ ಶಿಕ್ಷೆಯನ್ನು ವಿಧಿಸಿತು. ಅವರನ್ನು ದೇಶಾಂತರದಲ್ಲಿ, ಅಂದರೆ ಬ್ರಹ್ಮದೇಶದಲ್ಲಿ ಮಂಡಾಲೆ ಸೆರೆಮನೆಯಲ್ಲಿ ಇಟ್ಟಿತು. ೧೯೧೪ ರಲ್ಲಿ ಅಲ್ಲಿಂದ ಬಿಡುಗಡೆ ಹೊಂದಿ ಅವರು ಪುಣೆಗೆ ಮರಳಿದರು. ಈ ಕಷ್ಟಕರವಾದ ಸೆರೆಮನೆಯವಾಸದಿಂದ ತಿಲಕರು ಹಿಂಜರಿಯಲಿಲ್ಲ. ಮೊದಲು ಕೈಕೊಂಡಿದ್ದ ದೇಶ ಸೇವೆಯ ವ್ರತವನ್ನು ಮುಂದುವರಿಸಿದರು.

ದೇಶಕಾರ್ಯದ ಸಲುವಾಗಿ ಲೋಕಮಾನ್ಯರು ಮುಂಬಯಿಗೆ ಹೋದಾಗ ಅಲ್ಲಿ ಅವರಿಗೆ ಜಡ್ಡಾಯಿತು. ದುರ್ದೈವದಿಂದ ಆ ಜಡ್ಡು ವಾಸಿಯಾಗದೆ ೧೯೨೦ನೆಯ ಅಗಸ್ಟ ೧ನೆಯ ತಾರೀಖಿನ ದಿನ ಅವರು ತೀರಿಕೊಂಡರು. ಭಾರತೀಯರಾದ ನಾವು ಪ್ರತಿವರುಷವೂ ಅಗಸ್ಟ ೧ ರಂದು **"ಲೋಕಮಾನ್ಯರ ಪುಣ್ಯತಿಥಿ"** ಯನ್ನು ಆಚರಿಸುತ್ತೇವೆ.

## — ಅಭ್ಯಾಸ —

೧. ಲೋಕಮಾನ್ಯರು ದೇಶಕ್ಕೆ ಉಪದೇಶಿಸಿದ ಮಂತ್ರವು ಯಾವುದು ?
೨. ತಿಲಕರು ಹೊರಡಿಸಿದ ವರ್ತಮಾನ ಪತ್ರಗಳು ಯಾವವು ?



# ೩. ಮಾಲವೀಯ

"ರಾಮಪಾಲಸಿಂಹರೇ, ನನ್ನದೊಂದು ಮಾತು. ನೀವು ಕುಡಿದ ಮಬ್ಬಿನಲ್ಲಿ ನನ್ನೊಡನೆ ಮಾತನಾಡಬಾರದು ಈ ಮಾತನ್ನು ನೀವು ನಡೆಯಿಸಿ ಕೊಟ್ಟರೆ ನೌಕರಿ ಮಾಡುತ್ತೇನೆ." ಎಂದರು ಮಾಲವೀಯರು.

ಆಗಲಿ ಎಂದು ಒಪ್ಪಿದರು ರಾಮಪಾಲ ಸಿಂಹರು.

ರಾಮಪಾಲಸಿಂಹರು ದೊಡ್ಡ ಸಿರಿವಂತರು; ವಿಲಾಸಿ ಜೀವಿಗಳು, ಮದ್ಯಪಾನದ ವ್ಯಸನವುಳ್ಳವರು; "ಹಿಂದುಸ್ತಾನ" ಎಂಬ ದಿನಪತ್ರಿಕೆಯ ಒಡೆಯರು. ಪಂಡಿತ ಮಾಲವೀಯರು ಆ ಪತ್ರಿಕೆಯ ಸಂಪಾದಕತ್ವವನ್ನು ವಹಿಸಿಕೊಳ್ಳುವಾಗ ಒಡೆಯರಿಂದ ಹೀಗೆ ಮಾತು ತೆಗೆದುಕೊಂಡರು ಬಡ ಮನೆತನದಲ್ಲಿ ಹುಟ್ಟಿದ ಮಾಲವಿಯರು ಬಿ. ಎ ಪರೀಕ್ಷೆಯ ಮುಂದೆ ಓದ ಲಿಕ್ಕಾಗದೆ, ಐವತ್ತು ರೂಪಾಯಿ ಮಾಸಿಕ ವೇತನದ ಉಪಾಧ್ಯಾಯರಾಗಿ- ದ್ದರು. ಮತ್ತು ಆ ಕೆಲಸವನ್ನು ಬಿಟ್ಟು "ಹಿಂದುಸ್ತಾನ" ಪತ್ರಿಕೆಯ ಸಂಪಾ ದಕರಾದರು. ರಾಮಪಾಲ ಸಿಂಹರು ಅವರಿಗೆ ಕೊಟ್ಟ ಮಾತನ್ನು ಎರಡೂವರೆ ವರುಷಗಳ ವರೆಗೆ ಬಲು ಜೋಕೆಯಿಂದ ಪಾಲಿಸಿದರು. ಮುಂದೆ ಒಂದು ದಿನ ಅಕಸ್ಮಾತ್ ಅದನ್ನು ಮುರಿದರು. ಕೂಡಲೆ ಮಾಲವೀಯರು ಆ ಕೆಲಸವನ್ನು ಬಿಟ್ಟುಬಿಟ್ಟರು.



೨೫. ಮದನಮೋಹನ ಮಾಲವೀಯ

ಆ ಮೇಲೆ ಪಂಡಿತ ಮದನಮೋಹನ ಮಾಲವಿಯರು ಎಲ್. ಎಲ್. ಬಿ. ಪರೀಕ್ಷೆ ಕೊಟ್ಟರು. ವಕೀಲಿಯನ್ನು ಆರಂಭಿಸಿದರು. ವಕೀಲಿಯನ್ನು

ಅವರು ತಮ್ಮ ದೇಶಬಾಂಧವರಿಗಾಗಿ ಉಪಯೋಗಿಸಿದರು. ಅವರ ಹಿಂದೀ ಹಾಗು ಇಂಗ್ಲಿಷ ಭಾಷೆಯ ಭಾಷಣಗಳು ಅತ್ಯಂತ ಆಕರ್ಷಕವಾಗುತ್ತಿದ್ದವು. ಜನತೆಯ ಅನುವು ಆಪತ್ತುಗಳನ್ನು ದೂರ ಮಾಡುವದಕ್ಕಾಗಿ ಅವರು ಸ್ವಯಂಸೇವಕ ದಲಗಳನ್ನು ಸ್ಥಾಪಿಸಿದರು. ಕಾಂಗ್ರೆಸ್ಸಿನಲ್ಲಿ ಸೇರಿ ದೇಶ ಸೇವೆಯನ್ನು ಮಾಡಿದರು.

ಪಂಡಿತ ಮಾಲವೀಯರ ದೇಶಕಾರ್ಯವು ಬಹು ಮುಖ್ಯವಾದದ್ದು. ವಿವಿಧ ಕಾರ್ಯ ಕ್ಷೇತ್ರಗಳಲ್ಲಿ ಅವರು ದುಡಿದರು. ಶಿಕ್ಷಣವನ್ನು ಮುಗಿಸಿದಾಗಿನಿಂದಲೂ ಒಂದು ವಿಷಯವು ಅವರ ಮನಸ್ಸಿನಲ್ಲಿ ಕಟೆಯುತ್ತಿತ್ತು. **"ಗಂಗಾ ತೀರದಲ್ಲಿ ಒಂದು ವಿದ್ಯಾಪೀಠವಾಗಬೇಕು; ವಿದ್ಯಾರ್ಥಿಗಳ ವಾಸಕ್ಕಾಗಿ ಒಂದು ಆಶ್ರಮವಾಗಬೇಕು. ಅಲ್ಲಿ ಗ್ರಂಥಾಲಯವಿರಬೇಕು. ಪ್ರಯೋಗ ಶಾಲೆಯೂ ಇರಬೇಕು."** ಎಂದು ಅವರು ತಮ್ಮ ಮನೀಷೆಯನ್ನು ಜನರ ಮುಂದಿರಿಸಿದರು; ಅದರ ಅಗತ್ಯವನ್ನು ಮನಗಾಣಿಸಿಕೊಟ್ಟರು. ರಾಜರು–ಮಹಾರಾಜರು, ಶೆಟ್ಟರು–ಶ್ರೀಮಂತರು, ಬಡವರು–ಬಲ್ಲಿದರು ಎಲ್ಲರ ಸಹಾನುಭೂತಿಯನ್ನೂ ದೊರಕಿಸಿ ಎರಡು ಕೋಟಿ ರೂಪಾಯಿಗಳನ್ನು ಕೂಡಿಸಿದರು. ಸರಕಾರವು ಮೊದಲು ಈ ಪ್ರಯತ್ನವನ್ನು ವಿರೋಧಿಸಿದರೂ ವಿದ್ಯಾ–ಪೀಠವನ್ನು ಸ್ಥಾಪಿಸುವದಕ್ಕೆ ಒಪ್ಪಿಗೆ ಕೊಟ್ಟಿತು; ಸಹಾಯವನ್ನು ನೀಡಿತು. ಅದೆ **"ಬನಾರಸ ಹಿಂದೂ ವಿಶ್ವವಿದ್ಯಾಲಯ".** ಪಂಡಿತ ಮಾಲವಿಯರ ಜೀವನದ ಮಹತ್ಕಾರ್ಯವಿದು; ಚಿರಸ್ಥಾಯಿಯಾದ ಲೋಕೋಪಕಾರವಿದು. ಎಲ್ಲ ಬಗೆಯ ಶಿಕ್ಷಣವನ್ನೂ ಇಲ್ಲಿ ಕೊಡಲಾಗುತ್ತದೆ. ಹಿಂದುಸ್ಥಾನದ ಎಲ್ಲ ಭಾಗಗಳ ವಿದ್ಯಾರ್ಥಿಗಳೂ ಇಲ್ಲಿ ಕಲಿಯುತ್ತಾರೆ.

ಪಂಡಿತರು ಐವತ್ತೈದು ವರುಷ ಭಾರತದ ಸೇವೆ ಮಾಡಿದರು. ಅಸ್ಪೃಶ್ಯತೆಯನ್ನು ತೆಗೆದು ಹಾಕುವಂತೆ ಹಿಂದುಗಳಿಗೆ ಇವರು ಸಂದೇಶವಿತ್ತರು. ಹಿಂದೂ ಮಹಾಸಭೆಯನ್ನು ಸ್ಥಾಪಿಸಿದ ಹಿರಿಯರಲ್ಲಿ ಇವರು ಪ್ರಮುಖರು. ಹಿಂದೀ ಸಾಹಿತ್ಯ ಸಮ್ಮೇಲನಕ್ಕೆ ಇವರು ಎರಡುಸಲ ಅಧ್ಯಕ್ಷರಾಗಿದ್ದರು, ಕಾಂಗ್ರೆಸ್ಸಿನ ಅಧ್ಯಕ್ಷಪದದ ಮಾನವು ಇವರಿಗೆ ಮೂರು ಸಲ ದೊರೆತಿತ್ತು. ಇವರು ತಮ್ಮ ವಯಸ್ಸಿನ ೮೫ನೆಯ ವರುಷದಲ್ಲಿ ಮರಣ ಹೊಂದಿದರು.

ಮಹಾತ್ಮಾ ಗಾಂಧಿಯವರಿಗೆ ಮಾಲವೀಯರಲ್ಲಿ ತುಂಬ ಆದರವಿತ್ತು. ಅವರ ಬಗ್ಗೆ ಮಹಾತ್ಮರ ಉದ್ಗಾರಗಳು ಇವು,

**"ನಾನು ಮಾಲವಿಯರ ಭಕ್ತನು. ಅವರು ತಾರುಣ್ಯದಲ್ಲಿ ಆರಂಭಿಸಿದ ದೇಶ ಸೇವೆಯ ಪ್ರವಾಹವು ಇಂದಿಗೂ ಹರಿಗಡಿಯದೆ ಹರಿಯುತ್ತದೆ. ಆಚಾರದಲ್ಲಿ ಅವರು ಎಷ್ಟು ಕಠೋರರೋ ಮನಸ್ಸಿನಿಂದ ಅಷ್ಟೇ ಉದಾರರು. ಅವರು ಯಾರನ್ನೂ ದ್ವೇಷಿಸುವವರಲ್ಲ. ಶತ್ರುಗಳಿಗೆ ಕೇಡನ್ನೂ ಬಗೆಯುವವರಲ್ಲ."**

-- ಅಭ್ಯಾಸ —

೧. ಮಾಲವೀಯರ ಜೀವನದ ಮುಖ್ಯ ಕಾರ್ಯವು ಯಾವದು ?

೨. ಮಾಲವೀಯರ ಬಗ್ಗೆ ಗಾಂಧೀಜಿ ಏನು ಹೇಳಿದ್ದಾರೆ ?

೩. ಮಾಲವೀಯರು ಯಾವ ಯಾವ ಸಂಸ್ಥೆಗಳ ಮುಖಾಂತರ ಕಾರ್ಯ ಮಾಡಿದರು?



# ೪. ಮಹಾತ್ಮಾ ಗಾಂಧಿ

ಮಹಾತ್ಮಾ ಗಾಂಧಿಯವರು ಹಿಂದುಸ್ಥಾನದಲ್ಲಿ ಮೊದಲನೆಯ ದೊಡ್ಡ ಚಳವಳಿ ಮಾಡಿದ್ದು ಬಿಹಾರ ಪ್ರಾಂತದ ಚಂಪಾರಣ್ಯದಲ್ಲಿ. ಅಲ್ಲಿಯ ಚಹಾ ಗಿಡಗಳ ಒಡೆಯರು ಕೆಂಪು ಜನರು, ಅಂದರೆ ಪಾಶ್ಚಾತ್ಯರು. ಅವರಿಗೆ ಸರಕಾರದ ಬೆಂಬಲವಿದ್ದಿತು. ಆ ಬಲದಿಂದ ಅವರು ತೋಟಗಾರರನ್ನು ಬಹಳವಾಗಿ ಪೀಡಿಸುತ್ತಿದ್ದರು. ಆ ಅನ್ಯಾಯವನ್ನು ಎದುರಿಸುವದಕ್ಕಾಗಿ ಸತ್ಯಾಗ್ರಹವನ್ನು ಹೂಡಲಾಯಿತು. ಅದರಲ್ಲಿ ಪೋಲಿಸರಿಂದ ಪ್ರಹಾರವಾಯಿತು. ಒಬ್ಬ ತರುಣ ತೋಟಿಗನ ತಲೆಗೆ ಬಲವಾಗಿ ಪೆಟ್ಟು ತಗಲಿತು. ಅದರಿಂದ ಕೊನೆಗೆ ಅವನು ಸತ್ತೇಹೋದನು.

ಆ ತೋಟಿಗನಿಗೆ ಮುದುಕ ತಾಯಿ ಇದ್ದಳು. ಅವಳು ಅಳುತ್ತ ಗಾಂಧೀಜಿಯವರ ಹತ್ತಿರ ಬಂದು ಗೋಳಿಟ್ಟಳು: "ಸ್ವಾಮೀ, ನನಗೆ ಅವನೊಬ್ಬನೇ ಮಗನಿದ್ದನು. ಅವನನ್ನು ತಂದುಕೊಡಿರಿ ! "

ಆ ತಾಯಿಯ ದುಃಖವನ್ನು ಕಂಡು ಮಹಾತ್ಮರ ಹೃದಯದಲ್ಲಿ ತಳಮಳವಾಯಿತು. ಅವರು ಆಕೆಗೆ ನುಡಿದರು: "ತಾಯೀ, ಅವನನ್ನು ಬದುಕಿಸಿ ಕೊಡುವ ಶಕ್ತಿ ನನಗೆಲ್ಲಿದೆಯವ್ವಾ ? ನಾನು ನಿನಗೆ ಬೇರೊಬ್ಬ ಮಗನನ್ನು ಕೊಡುತ್ತೇನೆ ಹೀಗೆಂದು ಅವರು ಆ ಮುದುಕಿಯ ಪಾದಗಳ ಮೇಲೆ



೨೫. ಮಹಾತ್ಮಾ ಗಾಂಧಿ

ಹಣೆಯನ್ನಿಟ್ಟರು. ಈ ಸತ್ಯಾಗ್ರಹದ ಹೋರಾಟದಲ್ಲಿ ಗಾಂಧಿ ಸತ್ತನು. ಇದೋ, ಇವನೇ ನಿನ್ನ ಮಗನು, ಬದುಕಿಯೇ ಇದ್ದಾನೆ. ನಿನ್ನ ಪಾದಕ್ಕೆ ನಮಸ್ಕಾರ ಮಾಡುತ್ತಿದ್ದಾನೆ." ಎಂದು ಅಂದರು.

ಮುದುಕಿಯ ಕಣ್ಣುಗಳಲ್ಲಿ ಕೆರೆಯ ಕೋಡಿಯೊಡೆದಂತೆ ಕಣ್ಣೀರಿನ ಪ್ರವಾಹವು ಧುಮುಕಿತು. ಅಳುತ್ತಳುತ್ತ ಅವಳು ಮಹಾತ್ಮರನ್ನು ಹರಿಸಿದಳು, "ಬಾಪು, ಏಳಪ್ಪಾ ನಿನಗೆ ನೂರುವರುಷ ಆಯುಷ್ಯವಿದೆ! "

ಸಂಕಟದಲ್ಲಿ ಸಿಲುಕಿದವರೆಲ್ಲರೂ ತನ್ನವರೆಂದು ಗಾಂಧೀಜಿಯವರಿಗೆ ಅನಿಸುವದು. ಅವರು ಒಕ್ಕಲಿಗರಿರಲಿ, ಕೂಲಿಯವರಿರಲಿ, ಶ್ರೀಮಂತ ರಿರಲಿ, ಮಹಾರೋಗಿಗಳಿರಲಿ,–ಯಾರಿದ್ದರೂ ಅವರನ್ನು ಅವರು ಮಮತೆ ಯಿಂದ ಕಾಣುವರು. ಅದೇ ಚಂಪಾರಣ್ಯದಲ್ಲಿಯ ಇನ್ನೊಂದು ಸಂಗತಿ. ಮಹಾತ್ಮರ ಜೊತೆಯಲ್ಲಿ ಒಬ್ಬ ಸತ್ಯಾಗ್ರಹಿ ಮಹಾರೋಗಿಯಾಗಿದ್ದನು. ಒಂದು ದಿನ ಸಂಜೆಗೆ ಸತ್ಯಾಗ್ರಹಿಗಳೆಲ್ಲ ತಮ್ಮ ಶಿಬಿರಕ್ಕೆ ಹಿಂತಿರುಗಿದರು. ಎಲ್ಲರೂ ಶಿಬಿರಕ್ಕೆ ಬಂದ ಬಳಿಕ ಸಂಜೆಯ ಪ್ರಾರ್ಥನೆಗಾಗಿ ಸೇರಿದರು. ಬಾಪೂಜಿ ಸುತ್ತಮುತ್ತಲೂ ನೋಡಿದರು. ಮಹಾರೋಗಿ ಸಭೆಯೊಳಗೆ ಇದ್ದಂತೆ ಕಾಣಲಿಲ್ಲ. ಅವನ ಬಗ್ಗೆ ವಿಚಾರಿಸಿದರು. ನಡೆಯುವದಕ್ಕೆ ಆಗದ್ದರಿಂದ ಅವನು ದಾರಿಯಲ್ಲಿಯೇ ನಿಂತನೆಂದು ಗೊತ್ತಾಯಿತು. ಮಹಾ ತ್ಮರು ಹಾಗೆಯೇ ಚಟಕ್ಕನೇ ಎದ್ದು ಹೊರಟೇಬಿಟ್ಟರು. ಹೊರಗೆ ಸುತ್ತಲೂ ಕತ್ತಲೆ ಕವಿದಿತ್ತು. ಕೈಯೊಳಗೆ ದೀಪವನ್ನು ಹಿಡಿದುಕೊಂಡು ಹೋಗಿ ಆ ಮಹಾರೋಗಿಯನ್ನು ಹುಡುಕಿದರು.

"ಇದೇನಪ್ಪ, ನಿನಗೆ ನಡೆಯುವದಕ್ಕೆ ಆಗದಿದ್ದರೆ ನನಗೆ ಹೇಳಲಿಲ್ಲ ವೇಕೆ ?" ಎಂದು ನುಡಿದು ಗಾಂಧೀಜಿಯವರು ನೆತ್ತರು ಮುಳುಗಿದ ಅವನ ಕಾಲಿಗೆ ಬಟ್ಟೆಯನ್ನು ಕಟ್ಟಿದರು. ನಿಧಾನವಾಗಿ ಅವನನ್ನು ಶಿಬಿರಕ್ಕೆ ಕರೆದು ಕೊಂಡು ಬಂದರು. ಅವನ ಕಾಲುಗಳನ್ನು ಜಳಜಳ ತೊಳೆದು ತಮ್ಮ ಬದಿಯಲ್ಲಿ ಕುಳ್ಳಿರಿಸಿಕೊಂಡರು. ಆ ಮೇಲೆ ಪ್ರಾರ್ಥನೆ ಮಾಡಲಾಯಿತು.

**ಸಾಧುಗಳ ಜೀವನದ ಮಹತಿಯೇ ಇದು. ಎಲ್ಲರೂ ತನ್ನವರು; ಎಲ್ಲರ ಹಿತವೇ ತನ್ನ ಜೀವನದ ಗುರಿ; ಅದು ತನ್ನ ದೇವಪೂಜೆ;** ಎಂಬುದೇ ಅವರ ಮೂಲ ಮಂತ್ರ. ಗಾಂಧೀಜಿಯವರ ಧರ್ಮವು ಇದು. ಇವರು ಬಡವರ ಕೈವಾರಿ; ಅಸ್ಪೃಶ್ಯರು ಅವರ ಧರ್ಮದಲ್ಲಿಲ್ಲ; ಅವರು ಇವ ರಿಗೆ ಹರಿ ಜನರು, ದೇವರ ಮನುಷ್ಯರು; ಸತ್ಯ ಅಹಿಂಸೆಗಳು ಇವರ ಧರ್ಮದ ಉಸಿರು. ನಡೆಯಲ್ಲಿ ನುಡಿಯಲ್ಲಿ ಈ ಧರ್ಮವನ್ನು ಪಾಲಿಸಿಯೇ ಇವರು

ಮಹಾತ್ಮರಾದರು. ಇಷ್ಟೇ ಅಲ್ಲ, ಭಾರತಕ್ಕೆ ಸ್ವಾತಂತ್ರ್ಯವನ್ನು ದೊರಕಿಸುವದಕ್ಕಾಗಿ, ಪ್ರಬಲರಾದ ಆಂಗ್ಲರೊಡನೆ ಹೋರಾಡುವದಕ್ಕೂ **ಸತ್ಯ-ಅಹಿಂಸೆಗಳೇ** ಇವರ ಅಸ್ತ್ರಗಳು; ಅವುಗಳಿಂದಲೇ ದೇಶಕ್ಕೆ ಜಯವನ್ನು ತಂದು ಕೊಟ್ಟರು. **ಸ್ವರಾಜ್ಯವನ್ನು** ಸ್ಥಾಪಿಸಿದರು.

ಇವರು ಮಾಡಿದ ಕೆಲಸಗಳು ಒಂದೇ ಎರಡೇ ಅಸ್ಪೃಶ್ಯ ನಿವಾರಣೆ, ಹಿಂದು-ಮುಸಲ್ಮಾನರಲ್ಲಿ ಐಕ್ಯತೆಯನ್ನು ಬೆಳೆಸುವದು. ಶಾಲೆಯ ಶಿಕ್ಷಣ ಕೈಗಾರಿಕೆ, ಇತ್ಯಾದಿ ಮಹತ್ ಕಾರ್ಯಗಳನ್ನು ಮಾಡಿದರು.

ವಿಧಿ ಇಂತಹ ಮಹಾತ್ಮರ ಆಹುತಿಯನ್ನು ೧೯೪೮ ಜನವರಿ ೩೦ ರಂದು ತೆಗೆದುಕೊಂಡಿತು.

**ಓಂ ಶಾಂತಿ! ಶಾಂತಿ!! ಶಾಂತಿಃ!!!**

## — ಅಭ್ಯಾಸ —

೧. ಗಾಂಧೀಜಿಗೆ ಮಹಾತ್ಮರೆನ್ನುವದು ಹೇಗೆ ಅನ್ವರ್ಥಕವಾಗಿದೆ ಎಂಬುದನ್ನು ಹೇಳಿರಿ.

೨. ಮಹಾತ್ಮರ ಬಗ್ಗೆ ಒಂದು ಕಥೆಯನ್ನು ಹೇಳಿರಿ.



## ೫. ಸ್ವಾಮಿ ವಿವೇಕಾನಂದರು

"ಬಂದರದಲ್ಲಿ ಒಂದು ಹೊಸ ಮಾದರಿಯ ಹಡಗು ಬಂದಿದೆಯಂತೆ. ಅದನ್ನು ನಾವು ನೋಡುವದು ಹೇಗೆ ? ಅಲ್ಲಿ ಬಂದರದೊಳಗೆ ಹೋಗುವದಕ್ಕೆ ಅಧಿಕಾರಿಯ ಒಪ್ಪಿಗೆಯು ಬೇಕಂತೆ. ಹುಡುಗರಾದ ನಮಗೆ ಒಪ್ಪಿಗೆ ಸಿಕ್ಕುವ ಬಗೆ ಹೇಗೆ ?"

ಕಲಕತ್ತೆಯಲ್ಲಿ ಒಂದು ಶಾಲೆಯ ಮೂರುನಾಲ್ಕು ಹುಡುಗರು ಹೀಗೆ ವಿಚಾರ ಮಾಡಿ ನಿರಾಶರಾದರು. ಆದರೆ ಅವರೊಳಗೊಬ್ಬನು ಚತುರನಿದ್ದನು. ಸಾಲೆ ಬಿಟ್ಟಕೂಡಲೆ ಅವನು ತನ್ನ ಸಂಗಡಿಗರನ್ನು ಕರೆದುಕೊಂಡು ಬಂದರಕ್ಕೆ ಹೋದನು. ಒಪ್ಪಿಗೆಯನ್ನು ಕೇಳುವದಕ್ಕಾಗಿ ಅವರು ಅಧಿಕಾರಿಯ ಬಂಗಲೆಯ ಕಡೆ ಹೊರಟರು. ಆದರೆ ಪೋಲೀಸನು ಅವರನ್ನು ತಡೆದನು. "ಈಗ ಸಾಹೇಬರು ಸಿಕ್ಕುವದಿಲ್ಲ, ನಡೆಯಿರಿ." ಎಂದು ಅವನು ಹುಡುಗರನ್ನು ಬೆದರಿಸಿ ಅಟ್ಟಿದನು. ಆಗ ಆ ಚತುರ ಹುಡುಗನು ಸ್ವಲ್ಪ ಹಿಂದಕ್ಕೆ ಹೋದಹಾಗೆ ನಟಿಸಿ, ಪೋಲೀಸನ ಕಣ್ಣು ತಪ್ಪಿಸಿ, ಇನ್ನೊಂದು ಬಾಗಿಲಿಂದ ಒಳಹೊಕ್ಕನು. ಅಧಿಕಾರಿ ಅಟ್ಟದ ಮೇಲೆ ಅಡ್ಡಾಡುತ್ತಿರುವದು ಅವನಿಗೆ ಕಾಣಿಸಿತು. ಅವನು ನೆಟ್ಟಗೆ ಮೇಲೆ ಹೋಗಿ ಅಧಿಕಾರಿಯನ್ನು ಕಂಡು, ತಾನು ಬಂದ ಕೆಲಸವನ್ನು ತಿಳಿಸಿದನು. ಹುಡುಗನ ಸಾಹಸಕ್ಕೆ ಕೌತುಕಬಟ್ಟು ಅಧಿಕಾರಿ ಒಪ್ಪಿಗೆ ಚೀಟಿಯನ್ನು ಬರೆದುಕೊಟ್ಟನು. ತಿರುಗಿ ಬರುವಾಗ ಆ ಹುಡುಗನು ಬೇಕಂತಲೇ ಪೋಲೀಸನ ಎದುರಿನಲ್ಲಿಯೆ ಒಳ್ಳೇ ಠೀವಿಯಿಂದ ಹಾಯ್ದು ಬಂದನು. ಮತ್ತು " ಇದು ನೋಡು ಒಪ್ಪಿಗೆ ಚೀಟಿ " ಎಂದು ಅವನಿಗೆ ಅದನ್ನು ತೋರಿಸಿದನು. ಆ ಹುಡುಗನೇ **ನರೇಂದ್ರನಾಥ ದತ್ತನು.** ಅವನೇ ಮುಂದೆ **ಸ್ವಾಮಿ ವಿವೇಕಾನಂದ**ನೆಂದು ಹೆಸರು ಪಡೆದವನು.

ನರೇಂದ್ರನು ವಿದ್ಯಾರ್ಥಿಯಾಗಿದ್ದಾಗಲೇ **ಸ್ವಾಮಿ ಶ್ರೀರಾಮಕೃಷ್ಣ ಪರಮಹಂಸರ** ಉಪನ್ಯಾಸಗಳನ್ನು ಕೇಳಲು ಹೋಗುತ್ತಿದ್ದನು. ಪರಮ

ಹಂಸರ ಜ್ಞಾನವು ಅವನ ಮನವನ್ನು ಸೆಳೆಯಿತು. ಅವನು ಅವರ ಶಿಷ್ಯ ನಾಗಿ ಸಂನ್ಯಾಸವನ್ನು ಸ್ವೀಕರಿಸಿದನು. ಆ ತರುವಾಯ ಆತನು ಧರ್ಮದಲ್ಲಿ ಆಳವಾದ ವಿಚಾರ ಮಾಡುವ ಅಭ್ಯಾಸದಲ್ಲಿಯೇ ಕಳೆದನು.

ಈ ಕಾಲದಲ್ಲಿ ಅಮೇರಿಕಾ ದೇಶದ ಚಿಕ್ಯಾಗೋ ನಗರದಲ್ಲಿ ಜಗತ್ತಿನೊಳಗಿನ ಎಲ್ಲ ಧರ್ಮಗಳ ಸಭೆಸೇರಿತ್ತು. ಸ್ವಾಮಿ ವಿವೇಕಾನಂದರು ಹಿಂದೂ ಧರ್ಮದ ಪ್ರತಿನಿಧಿಯಾಗಿ ಅಲ್ಲಿಗೆ ಹೋದರು. ಹಿಂದೂ ಧರ್ಮವನ್ನು ಕುರಿತು ಆ ಸಭೆಯಲ್ಲಿ ಭಾಷಣ ಮಾಡಿದರು. ಅವರಲ್ಲಿ ಅವರ ವಿದ್ವತ್ತೇ ತುಂಬಿ ತುಳುಕುತ್ತಿತ್ತು; ಅವರ ಮಾತನಾಡುವ ಕಲೆಯೂ ಮನವನ್ನು ಸೆಳೆಯುವಂತಿತ್ತು. ಅವರ ಭಾಷಣವು ನೆರೆದ ಪಂಡಿತರನ್ನೆಲ್ಲ ಮೆಚ್ಚಿಸಿತು. ಹಿಂದೂ ಧರ್ಮದ ಹಿರಿಮೆಯೂ ಭಾರತದ ಪ್ರತಿಭೆಯೂ ಜಗತ್ತಿಗೇ ಗೊತ್ತಾಯಿತು. ಆ ಮೇಲೆ ಅಮೇರಿಕೆಯಲ್ಲಿ ಸ್ವಾಮೀಜಿಯವರ ಹಲವಾರು ಭಾಷಣಗಳಾದವು. "ಸಭಿಕರನ್ನು ಕೊನೆಯ ವರೆಗೂ ಹಿಡಿದಿಡುವದಕ್ಕಾಗಿ ವಿವೇಕಾನಂದರ ಭಾಷಣವನ್ನು ಕೊನೆಯಲ್ಲಿ ಇಡುತ್ತಿದ್ದರು. ಬೇರೆಯವರ ಭಾಷಣವನ್ನು ಜನರು ಹಾಗೂ ಹೇಗೋ ಕೇಳಿಕೊಳ್ಳುತ್ತಿದ್ದರು. ಇವರು ಮಾತನಾಡಿದರೆಂದರೆ ಕೊಂಚವೂ ಸದ್ದಾಗುತ್ತಿರಲಿಲ್ಲ. ಹದಿನೈದು ಇಪ್ಪತ್ತು ನಿಮಿಷಗಳ ವರೆಗೆ ಕೇಳಿದರೂ ಜನರಿಗೆ ಬೇಸರವಿಲ್ಲ" ಎಂದು ಸ್ವಾಮಿಜಿಯವರ ಭಾಷಣ ಕಲೆಯನ್ನು ಅಮೇರಿಕೆಯ ಒಂದು ವರ್ತಮಾನ ಪತ್ರವು ಹೊಗಳಿತು.

ಅಮೇರಿಕೆಯಲ್ಲಿ ವಿವೇಕಾನಂದರು ಸಂಚರಿಸಿದರು; ಹಲವು ಜನ ಶಿಷ್ಯರನ್ನು ಗಳಿಸಿ, ಮಠವನ್ನು ಸ್ಥಾಪಿಸಿದರು. ಅಲ್ಲಿಂದ ಅವರು ಇಂಗ್ಲಂಡಿಗೆ ಹೋದರು. ಅಲ್ಲಿಯೂ ಅನೇಕ ಅನುಯಾಯಿಗಳು ದೊರೆತರು. ಅವರಲ್ಲಿ ಮಾರ್ಗ್ಗಾರೇಟ್ ಎಂಬ ಶಿಷ್ಯೆ ಹಿಂದುಸ್ತಾನಕ್ಕೆ ಬಂದು ವಾಸಮಾಡಿದಳು. ಮತ್ತು ಆ ದೇಶಕ್ಕೆ ಸೇವೆಯನ್ನು ಸಲ್ಲಿಸಿದಳು. ಈಕೆಯ ಹಿಂದೂ ಹೆಸರು **ಸೋದರಿ ನಿವೇದಿತಾ.** ಸ್ವಾಮೀಜಿಯವರು ಹಿಮಾಲಯದಲ್ಲಿ ಆಲ್ಮೋರಾದಲ್ಲಿಯೂ ಕಲಕತ್ತೆಯ ಬಳಿಯಲ್ಲಿಯೂ ಬೇಲೂರಲ್ಲಿಯೂ ಮಠಗಳನ್ನು ಸ್ಥಾಪಿಸಿದರು. ಅವರು ಬಡವರಿಗೆ, ನಿರಾಶ್ರಿತರಿಗೆ, ಪೀಡಿತರಿಗೆ ಸಹಾಯವನ್ನು, ಶಿಕ್ಷಣವನ್ನು ಒದಗಿಸುವ ಏರ್ಪಾಡು ಮಾಡಿದರು.

**" ಇಡೀ ಜಗತ್ತು ಈಶ್ವರಮಯವು, ಎಲ್ಲ ಧರ್ಮಗಳು ಒಂದು"** ಎಂಬುದೇ ವಿವೇಕಾನಂದರ ಉಪದೇಶಗಳ ಸಾರವು. ಅವರ ಉಪದೇಶಗಳಿಂದ

ಹಿಂದುಗಳಲ್ಲಿ ಉತ್ಸಾಹವು ತುಂಬಿತು; ಅವರಲ್ಲಿ ತಮ್ಮ ಧರ್ಮದ ಬಗ್ಗೆ ಶ್ರದ್ಧೆ ಯುಂಟಾಯಿತು.

— ಅಭ್ಯಾಸ —

೧. ವಿವೇಕಾನಂದರ ಬಾಲ್ಯದ ಒಂದು ಸಂಗತಿಯನ್ನು ಹೇಳಿರಿ.
೨. ಅಮೇರಿಕೆಯಲ್ಲಿ ವಿವೇಕಾನಂದರು ಮಾಡಿದ ಕಾರ್ಯವೇನು?
೩. ಹಿಂದುಸ್ತಾನದಲ್ಲಿಯ ವಿವೇಕಾನಂದರ ಮಠಗಳಿಂದ ಯಾರಿಗೆ ಏನು ಪ್ರಯೋಜನವಿದೆ?

# ೬. ನೇತಾಜಿ ಸುಭಾಸಚಂದ್ರ

ಇವರು ಬಂಗಾಲ ಪ್ರಾಂತದವರು. ದೇಶದ ಸ್ವಾತಂತ್ರ್ಯದ ಹೋರಾಟದಲ್ಲಿ ಭಾರತದ ಒಬ್ಬ ದೊಡ್ಡ ಮುಂದಾಳು. ಅವರ ಜೀವನವು ಅದ್ಭುತವಾದದ್ದು, ಸಾಹಸಪೂರ್ಣವಾದದ್ದು. ೧೯೪೦ರಲ್ಲಿ ಅವರ ಚರಿತ್ರೆಯಲ್ಲಿಯ ಒಂದು ಸಂಗತಿಯನ್ನು ಕೇಳಿರಿ.

ಆಗಿನ್ನೂ ಭಾರತದಲ್ಲಿ ಆಂಗ್ಲರ ಆಳಿಕೆಯಿತ್ತು. ಸುಭಾಸಚಂದ್ರ ಭೋಸರ ಪ್ರಭಾವಕ್ಕೆ ಬೆದರಿದ್ದ ಆಗಿನ ಬಂಗಾಲ ಸರಕಾರವು, ಅವರನ್ನು ಅವರ ಮನೆಯಲ್ಲಿಯೆ ಬಂಧನದಲ್ಲಿಟ್ಟಿತು. ಮನೆಯ ಸುತ್ತಲೂ ಪೋಲೀಸರ ಬಿಗಿಯಾದ ಕಾವಲು. ಮನೆಯೊಳಗೆ ಬೇರೆ ಯಾರೂ ಇರುವಂತಿಲ್ಲ. ಒಳಗೆ ಯಾರೂ ಹೋಗುವಂತಿಲ್ಲ. ಬರುವಂತಿಲ್ಲ. ಸೆರೆಮನೆಯಲ್ಲಿದ್ದರೆ ಇತರ ಸೆರೆಯಾಳುಗಳೊಡನೆ ಮಾತನಾಡಲು ಅವಕಾಶವಿರುತ್ತಿತ್ತು; ಅನೇಕರ ಮೋರೆಗಳನ್ನಾದರೂ ನೋಡಬಹುದಾಗಿತ್ತು. ಆದರೆ ಸುಭಾಸರಿಗೆ ಏಕಾಂತ ವಾಸವೆಂದರೆ ಏಕಾಂತವಾಸವೇ. ಇದು ಅತ್ಯಂತ ಕಠಿಣವಾದ ಶಿಕ್ಷೆಯಾಗಿತ್ತು. ದಿನಾಲು ಮುಂಜಾನೆ ಒಮ್ಮೆ ಅವರಿಗೆ ಊಟದ ತಟ್ಟೆಯನ್ನು ಕಳಿಸಲಾಗುತ್ತಿತ್ತು; ಮರುದಿನ ಮತ್ತೊಂದು ತಟ್ಟೆಯಲ್ಲಿ ಊಟವನು ಒಯ್ದಿಡುವದು, ಹಿಂದಿನ ದಿನದ ತಟ್ಟೆಯನ್ನು ತರುವದು.

ಈ ಕ್ರಮವನ್ನು ಕಂಡು ಸುಭಾಸಚಂದ್ರ ಬೋಸರು ಈಶ್ವರ ಧ್ಯಾನ ವನ್ನು ಮಾಡಬೇಕೆಂದು ನಿರ್ಧರಿಸಿದರು. ಮತ್ತು ಮನೆಯ ಒಂದು ಕೋಣೆಯ

ಬಾಗಲಿಗೆ ಪರದೆಯನ್ನು ಹಾಕಿ, ಧ್ಯಾನ ಮಾಡುತ್ತ ಕುಳಿತುಕೊಳ್ಳ ತೊಡಗಿದರು. ಊಟವನ್ನು ಒಯ್ಯುತ್ತಿದ್ದ ಮನುಷ್ಯನೂ ಒಳಕ್ಕೆ ಹೋಗುವಂತಿಲ್ಲ; ತಟ್ಟೆಯನ್ನು ಹೊರಗೇ ಇಟ್ಟು ಹೋಗಬೇಕೆಂದು ವಿಧಿಸಿದರು. ಎಷ್ಟೋ ದಿನ ಹೀಗೆ ಸಾಗಿತು. ಒಂದು ದಿನ ಆ ಮನುಷ್ಯನು ಊಟವನ್ನು ಒಯ್ದಾಗ ಹಿಂದಿನ ದಿನದ ಬಡಿಸಿಟ್ಟ ತಟ್ಟೆ ಹಾಗೆಯೇ ಇತ್ತು. ಸುಭಾಸರಿಗೆ ಮೈಯೊಳಗೆ ನೆಟ್ಟಗಿರಲಿಕ್ಕಿಲ್ಲ ಎಂದು ಅಂದುಕೆಂಡು ಅವನು ಸುಮ್ಮನಿದ್ದನು. ಎರಡು ಮೂರು ದಿನ ಹೀಗೆಯೆ ಆಯಿತು. ಆಗ ಮಾತ್ರ ಅವನು ಗಾಬರಿಯಾಗಿ ಈ ಸಂಗತಿಯನ್ನು ಸುಭಾಸರ ಅಣ್ಣ ಶರಚ್ಚಂದ್ರರಿಗೂ ಸರಕಾರಕ್ಕೂ ತಿಳಿಸಿದನು.

"ತಮ್ಮನಿಗೆ ಬಹಳ ಜಡ್ಡಾಗಿರಬೇಕು" ಎಂದು ಶರಚ್ಚಂದ್ರರಿಗೆ ಅನಿಸಿತು. ಅವರು ಸುಭಾಸರ ದರ್ಶನಕ್ಕಾಗಿ ಸರಕಾರದ ಸಮ್ಮತಿಯನ್ನು ಬೇಡಿದರು, ಅವರೂ ಸರಕಾರೀ ಅಧಿಕಾರಿಗಳೂ ಬಂದರು. ನೋಡುತ್ತಾರೆ ಸುಭಾಸಚಂದ್ರರು ಸೆರೆಮನೆಯಲ್ಲಿಲ್ಲ. ಅವರ ಮನಸ್ಸಿಗೆ ಬಲವಾದ ಪೆಟ್ಟುತಾಗಿದಂತಾಯಿತು. "ಸುಭಾಸರು ಸೆರೆಯಿಂದ ತಪ್ಪಿಸಿಕೊಂಡು ಕಾಣೆಯಾಗಿದ್ದಾರೆ!" ಎಂದು ಎಲ್ಲ ಕಡೆಗೂ ತಂತಿಗಳ ಮೇಲೆ ತಂತಿಗಳು ಹೋದವು. ಪೋಲೀಸರು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಹುಡುಕಿದರು. ಕೊನೆಗೂ ಸಿಕ್ಕಲಿಲ್ಲ ಅವರು.

ಎಲ್ಲಿ ಹೋದರು ಸುಭಾಸರು ? ದೇಶದ ಸ್ವಾತಂತ್ರ್ಯದ ಸಲುವಾಗಿ ತಮ್ಮ ಪ್ರೀತಿಯ ನಾಡನ್ನು ಬಿಟ್ಟರು. ಅದು ಆಂಗ್ಲರಿಗೂ ಜರ್ಮನರಿಗೂ ಯುದ್ಧ ನಡೆದ ಕಾಲ. ವೇಷಾಂತರದಿಂದ ಗುಪ್ತವಾಗಿ ಪ್ರವಾಸಮಾಡಿ ಕಾಬೂಲ ಮಾರ್ಗವಾಗಿ ಜರ್ಮನಿಗೆ ಹೋದರು. ಹಿಂದುಸ್ಥಾನವನ್ನು ಸ್ವತಂತ್ರ ಗೊಳಿಸುವ ಸಲುವಾಗಿ ಜರ್ಮನಿಯ ಮತ್ತು ರಶಿಯದ ನೆರವನ್ನು ಕೇಳಿದರು. ಅಲ್ಲಿಂದ ೧೯೪೩ರಲ್ಲಿ ಜಪಾನಕ್ಕೆ ಹೋಗಿ, ಕೆಲದಿನಗಳ ಮೇಲೆ ಸಿಂಗಾಪೂರಕ್ಕೆ ಹೋದರು. ಅಲ್ಲಿ "ಆಜಾದ ಹಿಂದ ಸರಕಾರ"ವನ್ನು— ಅಂದರೆ ಸ್ವತಂತ್ರ ಭಾರತ ಸರಕಾರವನ್ನು ಸ್ಥಾಪಿಸಿದರು. ಅವರ ಆಜಾದ ಹಿಂದ ಸೇನೆ ಬ್ರಹ್ಮದೇಶದ ಮಾರ್ಗವಾಗಿ ಆಸಾಮದ ಗಡಿಗೆ ಬಂದಿತು. ಅಲ್ಲಿ ಆಂಗ್ಲ ಸೇನೆಗೆ ಚೆನ್ನಾಗಿಯೇ ಏಟು ಕೊಟ್ಟಿತು. ಸುಭಾಸರು ಸ್ವಾತಂತ್ರ್ಯಕ್ಕಾಗಿ ಸಶಸ್ತ್ರಯುದ್ಧವನ್ನೇನೋ ಮಾಡಿದರು. ಆದರೆ ಅಷ್ಟರಲ್ಲಿ ಜಪಾನ—

ಜರ್ಮನಿಗಳು ಸೋತವು. ಅದರ ಪರಿಣಾಮವಾಗಿ ಆಜಾದ ಹಿಂದ ಸರಕಾರಕ್ಕೊ ಪೆಟ್ಟು ಬಿದ್ದಿತು. ಆಗ ಸುಭಾಸರು ಜಪಾನಕ್ಕೆ ಹೊರಟಾಗ ವಿಮಾನ ಅಪಘಾತದಿಂದ ಮಡಿದರೆಂದು ಅನ್ನುತ್ತಾರೆ. "ಅದು ಸುಳ್ಳು, ಅವರಿನ್ನೂ ಬದುಕಿದ್ದಾರೆ." ಎಂದು ಕೆಲವರೆನ್ನುತ್ತಾರೆ ಇದ್ದರೆ ಈ ಸ್ವತಂತ್ರ ಭಾರತಕ್ಕೆ ಅವರು ಬರಬೇಕೆಂದು ಜನರು ಪ್ರಾರ್ಥಿಸುತ್ತಾರೆ. ಆದರೆ ಇದು ಶಕ್ಯವಿದೆಯೋ ?

ಸುಭಾಸರು ಆಯ್. ಸಿ. ಎಸ್. ಆದರೂ ಸರಕಾರದ ನೌಕರಿ ಮಾಡಲಿಲ್ಲ. ಮದುವೆಯಾಗಲಿಲ್ಲ. ಐಶ್ವರ್ಯವನ್ನೂ ಸಂಸಾರವನ್ನೂ ತೊರೆದು ದೇಶಸೇವೆಗೆ ನಿಂತರು. ಕಾಂಗ್ರೆಸ್ಸಿನಲ್ಲಿ ಪ್ರಭಾವೀ ನಾಯಕರಾಗಿದ್ದರು. ಕಾಂಗ್ರೆಸ್ಸ ಅಧ್ಯಕ್ಷಪದಕ್ಕೆ ಇವರು ಎರಡು ಸಲ ಅಧ್ಯಕ್ಷರಾಗಿದ್ದರು. ಒಮ್ಮೆಯಂತೂ ಮಹಾತ್ಮಾ ಗಾಂಧಿಯವರ ಬೆಂಬಲವುಳ್ಳ ಡಾ. ಪಟ್ಟಾಭಿಯವರನ್ನು ಸೋಲಿಸಿ ಆಯ್ಕೆ ಹೊಂದಿದ್ದರು. ಕಾಂಗ್ರೆಸ್ಸಿನಿಂದ ಹೊರಬಿದ್ದ ಬಳಿಕ ಪುರೋಗಾಮಿ ಪಕ್ಷವನ್ನು ಸ್ಥಾಪಿಸಿದರು.

ಭಾರತೀಯರು ಅವರನ್ನು "ದೇಶಗೌರವ" ಎಂಬ ಪದವಿಯನ್ನಿತ್ತು ಸನ್ಮಾನಿಸಿದರು. ಇವರು ಆಜಾದ ಹಿಂದ ಸರಕಾರವನ್ನು ಕಟ್ಟಿ ದೇಶಕ್ಕಾಗಿ ಹೋರಾಡಿ, ದೇಶಕ್ಕೆ ಗೌರವವನ್ನು ತಂದು, ಆ ಪದವಿಯನ್ನು ಸಾರ್ಥಕಗೊಳಿಸಿದರು. ಮಹಾತ್ಮರು ಇಲ್ಲಿ ಹೂಡಿದ "ಭಾರತದಿಂದ ತೊಲಗಿರಿ." ಚಳವಳಿಗೆ ಸುಭಾಸರ ಆಜಾದ ಹಿಂದ ಸೇನೆಯ ಪ್ರಯತ್ನವು ಸಹಾಯಕವಾಯಿತು. **೧೯೪೭ ನೆಯ ಇಸವಿ ಅಗಸ್ಟ ೧೫ನೆಯ ದಿನ ಭಾರತವು ಸ್ವತಂತ್ರವಾಯಿತು.**

## — ಅಭ್ಯಾಸ —

೧. ಸುಭಾಸಚಂದ್ರರು ದೇಶದ ಸ್ವಾತಂತ್ರ್ಯಕ್ಕಾಗಿ ಏನು ಮಾಡಿದರು ?

೨. ಸುಭಾಸಚಂದ್ರರ ಪಕ್ಷದ ಹೆಸರೇನು ?

**"ಜಯ ಹಿಂದ"**

